॥ ಶ್ರೀ ಕಾಳಿಕಾ ಪ್ರಸನ್ನ ॥

# ಇಂದ್ರಜಾಲ
# ಮಹೇಂದ್ರಜಾಲ
## ಯಕ್ಷಿಣಿ ವಿನೋದ

ಯಂತ್ರ, ಮಂತ್ರ, ತಂತ್ರ, ಸಹಿತ
ಇನ್ನೂ ಅನೇಕ ವಿಷಯಗಳ ಸಂಗ್ರಹವಿದೆ.



ಲೇಖಕರು:
**ಉಮಾಪತಿ**



ಪ್ರಕಾಶಕರು:
**ಎ. ಎಮ್. ಕರಡಿ**
ಬುಕ್‌ಸೇಲರ್, ಪಬ್ಲಿಶರ್, ಸ್ಟೇಶನ್‌ರೋಡ,
ಹುಬ್ಬಳ್ಳಿ

೧೯೫೯ ಮಾರ್ಚ

ಬೆಲೆ : ೨ರೂ. ೮ ಆ.
(೨ರೂ. ೫೦ ನಯೆಪೈಸಾ)

# ಪ್ರಕಾಶಕರ ನುಡಿ



ಮಂತ್ರ ಹಾಗೂ ಜಾದೂದ ಬಗೆಗೆ ಕನ್ನಡದಲ್ಲಿ ಪುಸ್ತಕಗಳು ತೀರ ಕಡಿಮೆ. ಈ ಎಲ್ಲ ವಿಷಯಗಳನ್ನು ವಿಸ್ತಾರವಾಗಿ ಒಳಗೊಂಡ ಶಾಸ್ತ್ರೀಯ ರೀತಿಯಲ್ಲಿ ಅಲ್ಲದೇ ಜನತೆಗೆ ಸುಲಭದಲ್ಲಿ ಈ ವಿಷಯವು ತಿಳಿಯುವಂತೆ ಬರೆಯಲ್ಪಟ್ಟ ಗ್ರಂಥಗಳು ಇಲ್ಲವೆಂದರೂ ಸರಿಯೇ. ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆಯಲಾರೆ. ಈ ಗ್ರಂಥದಲ್ಲಿ ಮಂತ್ರಗಳು, ಅವುಗಳ ಉಪಯೋಗ, ತಂತ್ರ, ಅದನ್ನು ಅನುಸರಿಸುವ ವಿಧಾನ ಕೊನೆಯಲ್ಲಿ ಯಂತ್ರಗಳು ಮತ್ತು ಅವುಗಳ ಉಪಯೋಗದ ರೀತಿ ಹೀಗೆ ವಿಷಯವನ್ನು ವಿವೇಚಿಸಲಾಗಿರುವದು. ಜಾದೂ ಪ್ರಕರಣವನ್ನು ಈ ಗ್ರಂಥದ ವಿಶೇಷ ಆಕರ್ಷಣೆಯಾಗಿ ಇದರಲ್ಲಿ ಸೇರಿಸಲಾಗಿರುವದು. ಯಾವ ಓದುಗರೂ ಸುಲಭದಲ್ಲಿ ಅವನ್ನು ಪ್ರಯೋಗಿಸಿ ನೋಡಬಹುದಾಗಿರುವದು. ಇದರ ಜೊತೆಗೆ ಔಷಧ ಪ್ರಕರಣವನ್ನು ವಾಚಕರ ಸೌಲಭ್ಯಕ್ಕಾಗಿ ಸೇರಿಸಲಾಗಿರುವದು. ಕೊನೆಯಲ್ಲಿ ಫಲ ಜ್ಯೋತಿಷ್ಯದ ಬಗೆಗೆ ಸಂಕ್ಷೇಪವಾಗಿ ಕೊಡಲಾಗಿದೆ. ಹೀಗೆ ಅನೇಕ ವಿಷಯಗಳನ್ನು ವಾಚಕರಿಗೆ ಸುಲಭವಾಗಿ ಅರ್ಥವಾಗುವ ರೀತಿಯಲ್ಲಿ ಇದರಲ್ಲಿ ಸೇರಿಸಲಾಗಿದ್ದು ಓದುಗರು ಅವುಗಳಿಂದ ಪ್ರಯೋಜನ ಹೊಂದುವರೆಂದು ನಮಗೆ ಭರವಸೆಯಿದೆ. ಓದುಗರಿಗೆ ಇದು ಉಪಯುಕ್ತವೆನಿಸಿದಲ್ಲಿ ಪ್ರಕಾಶಕರ ಶ್ರಮ ಸಾರ್ಥಕವೆನಿಸುವದು.

ಹುಬ್ಬಳ್ಳಿ
೬—೩—೧೯೫೯

ಪ್ರಕಾಶಕ

# ಅನುಕ್ರಮಣಿಕೆ



# ಶಿವ-ಪಾರ್ವತಿಯರ ಸಂವಾದ

ಕೈಲಾಸ ಶಿಖರವೊಂದು ಅತ್ಯಂತ ರಮಣೀಯವಾದ ಸ್ಥಾನ. ನಾನಾ ಬಗೆಯ ಫಲ ಪುಷ್ಪಗಳಿಂದ ಅದು ಸುಶೋಭಿತವಾಗಿರುವದು. ಗಾಳಿಯು ಸಹ ಅಲ್ಲಿ ಮಂದವಾಗಿ ಬೀಸುತ್ತ ಇರುವದು. ಸದಾ ಕಾಲದಲ್ಲಿಯೂ ವಸಂತಋತುವೇ ಅಲ್ಲಿದೆಯೋನೋ ಎಂಬಂತೆ ಕಾಣುವದು. ನಾನಾ ಬಗೆಯ ಗಣಗಳು ಸದಾಶಿವನ ಸೇವೆಗೆ ಸಿದ್ಧವಾಗಿ ನಿಂತಿರುವವು. ಇಂತಹ ಪ್ರಶಾಂತವಾದ ಸ್ಥಳದಲ್ಲಿ ಮಹಾದೇವನು ಸಮಾಧಿಸ್ಥನಾಗಿ ಕುಳಿತ ಸಮಯದಲ್ಲಿ ಪಾರ್ವತಿಯು ಬಂದು ನಮಸ್ಕರಿಸಿ ಕುಳಿತುಕೊಂಡಳು. ಕೈಲಾಸನಾಥ ಶಂಕರನು ಮಂದಸ್ಮಿತವಾಗಿ ಅವಳ ವಂದನೆಯನ್ನು ಸ್ವೀಕರಿಸಿ, ಪಾರ್ವತಿ ಇದೇನು ಈಗ ನಿನ್ನ ಆಗಮನ. ಏನೋ ಬೇಡ ಬಯಸಿ ಬಂದಂತಿರುವದು ಎಂದು ಕೇಳಿದನು.

“ ಶಂಭೋ ನಿನಗೆ ತಿಳಿಯದ ಸಂಗತಿಯಾದರೂ ಯಾವುದಿದೆ ? ನನ್ನ ಮನಸ್ಸಿನಲ್ಲಿ ಏನಿದೆಯೆಂಬುದನ್ನು ನೀನು ಅರಿತೇ ಇರುವಿ” ಪಾರ್ವತಿ ನುಡಿದಳು

‘ನಿಜ ನನಗೆ ಮಹಾವಿದ್ಯೆಯೊಂದನ್ನು ತಿಳಿದುಕೊಳ್ಳಬೇಕಾಗಿಯಲ್ಲವೆ? ಇಂದು ಮಾನವರು ಮಂತ್ರ ತಂತ್ರಗಳಿಲ್ಲದೇ ಅನೇಕ ಕಾರ್ಯಗಳನ್ನು ಮಾಡುತ್ತಿರುವದರಿಂದ ಅವೆಲ್ಲವೂ ನಿಷ್ಫಲವಾಗುತ್ತಿರುವವು. ಜಗತ್ತಿನಲ್ಲಿ ಪ್ರತಿಕಾರ್ಯಕ್ಕೂ ಮಂತ್ರ ತಂತ್ರದ ಅವಶ್ಯಕತೆ ಇದ್ದೇ ಇದೆ. ಆದರೆ ಈಗ ಕಲಿಯುಗದಲ್ಲಿ ಜನರಿಗೆ ಇವುಗಳ ಮೇಲೆ ವಿಶ್ವಾಸವೇ ಹಾರಿಹೋಗಿರುವದ.’ ಶಂಕರನು ಪಾರ್ವತಿಯ ಮನೋರಂಗವನ್ನು ಅರಿತವನಾಗಿ ಅವಳಿಗೆ ತಿಳಿಸಬೇಕಾದ ವಿದ್ಯೆಗೆ ಪೂರ್ವ ಪೀಠಿಕೆ ಹಾಕುತ್ತ ನುಡಿದನು

ಪಾರ್ವತಿಯು ಆ ವಿದ್ಯೆಯನ್ನೇ ತನಗೆ ಅರುಹಬೇಕೆಂದ, ಕೇಳಿಕೊಂಡಳು. ಈ ವಿದ್ಯೆಯಿಂದ ನಿನಗಾವ ಪ್ರಯೋಜನ ಪಾರ್ವತಿ ಎಂದು

ಕೈಲಾಸನಾಥನು ಕೇಳಲು ಈ ವಿದ್ಯೆಯು ಮನುಷ್ಯ ಮಾತ್ರನ ದುಃಖ ಹರಣ ಮಾಡುವ ಕಲ್ಯಾಣಕಾರಿಯಾದ ವಿದ್ಯೆಯಾಗಿರುವದು. ಅದಕ್ಕಾಗಿಯೇ ನಾನವನ್ನು ಕೇಳಲು ಇಚ್ಛಿಸುತ್ತಿರುವೆ ಎಂದು ಪಾರ್ವತಿ ತಿಳಿಸಿದಳು.

"ನಿಜ ನೀನು ಹೇಳುವಂತೆ ಈ ಇಂದ್ರಜಾಲ ವಿದ್ಯೆ ದುಃಖಿಗಳ ದುಃಖವನ್ನ ನಿವಾರಿಸುವಂತಹದೂ ಶತ್ರುಗಳ ನಾಶವನ್ನು ಮಾಡುವಂತಹವೂ ಆಗಿರುವದು ಅದನ್ನು ನಿನಗೀಗ ತಿಳಿಸುವೆ. ತದೇಕ ಚಿತ್ತಳಾಗಿ ಕೇಳುವಂತಹವಳಾಗು" ಎಂದು ಶ್ರೀ ಶಂಕರನು ಇಂದ್ರಜಾಲ ವಿದ್ಯೆಯನ್ನು ಪಾರ್ವತಿಗೆ ವಿವರಿಸತೊಡಗಿದನು.

ಇಂದ್ರಜಾಲ ವಿದ್ಯೆಯು ಅತ್ಯಂತ ಶ್ರೇಷ್ಠವಾದ ವಿದ್ಯೆಯಾಗಿದು ದೊಡ್ಡ ದೊಡ್ಡ ಕಾರ್ಯಗಳು ಸುಲಭವಾಗಿ ನೆರವೇರುವವು. ಆದರೆ ಇದು ಬಹು ಕಠಿಣವಾದ ವಿದ್ಯೆಯಾಗಿರುವದರಿಂದ ಅತ್ಯಂತ ಪರಿಶ್ರಮವೂ ಅವಶ್ಯವಿದೆ ಒಮ್ಮೊಮ್ಮೆ ಈ ವಿದ್ಯೆಯ ಸಾಧನೆಯಲ್ಲಿ ಭಯವು ಸಹ ಉಂಟಾಗಬಹುದಾಗಿದೆ. ಆದರೆ ಮಾನವನು ಸಾಹಸಿಯಾದ ಪ್ರಾಣಿಯಾಗಿರುವದರಿಂದ ಅವನಿಗೆ ಅಸಾಧ್ಯವಾದುದು ಯಾವುದೂ ಇರುವದಿಲ್ಲ. ಪುರಾಣ ಕಾಲದಲ್ಲಿ ಲಂಕಾಧಿಪತಿ ರಾವಣನು ಈ ವಿದ್ಯೆಯನ್ನು ಸಾಧಿಸಿಕೊಂಡಿದ್ದನು. ಆದರೆ ಈಗ ಗುರುವಿಲ್ಲದೇ ಈ ವಿದ್ಯೆಯನ್ನು ಸಾಧಿಸಿಕೊಳ್ಳಲು ಬರುವದಿಲ್ಲ. ಈ ವಿದ್ಯೆಯನ್ನು ದೊರಕಿಸಲು ಯೋಗ್ಯ ಗುರುವಿನ ಅವಶ್ಯಕತೆಯಿರುವದು. ಗುರುವಿನಿಂದಲೇ ಅವನಿಗೆ ಯೋಗ್ಯ ಮಾರ್ಗದರ್ಶನ ದೊರಕುವದು. ಗುರು ಸಹ ಶಾಂತನೂ, ಸಾತ್ವಿಕನೂ, ಗಂಭೀರನೂ ಆಗಿರಬೇಕು. ಚಂಚಲನಾಗಿರಬಾರದು, ತಪಸ್ವಿಯಾಗಿರಬೇಕು, ನಿಯಮಾನುಸಾರವಾಗಿ ನಡೆಯುವವನಾಗಿರಬೇಕು, ಸಜ್ಜನನಾಗಿರಬೇಕು ಇಂತಹ ಗುರುವನ್ನು ಹುಡುಕಿಕೊಂಡು ಅವರ ಮುಖಾಂತರ ಸಾಧನೆಯನ್ನು ಆರಂಭಿಸಬೇಕು.

ಗುರುಶಿಷ್ಯರಿಬ್ಬರೂ ನನ್ನ ಏಕನಿಷ್ಠ ಭಕ್ತರಾಗಿರಬೇಕು. ಅವರು ದಾನ ಹಾಗೂ ಭಿಕ್ಷೆಗಳನ್ನು ಸ್ವೀಕರಿಸಬಾರದು. ಶುದ್ಧ ಚಾರಿತ್ರ್ಯರಾಗಿರಬೇಕು. ದೇವರು ಹಾಗೂ ಗೋಬ್ರಾಹ್ಮಣರಮೇಲೆ ನಿಷ್ಠೆಯಿಲ್ಲದವರಿಗೆ ಈ

ವಿದ್ಯೆ ಸಾಧಿಸಲಾರದು. ಅಂಥವರಿಗೆ ದೀಕ್ಷೆಯನ್ನು ಕೊಡಬಾರದು. ಹೀಗೆ ದೀಕ್ಷೆ ಕೊಟ್ಟವರು, ಮತ್ತು ದೀಕ್ಷೆಯನ್ನು ತೆಗೆದುಕೊಂಡವರು ಪಾಪಿಗಳಾಗುವರು. ಆದರೆ ಯಾರು ಪರಿಶ್ರಮಪೂರ್ವಕವಾಗಿ ಸಾಧನೆಯನ್ನು ಮಾಡುವರೋ ಅವರು ಎಂದಿಗೂ ಅಸಫಲರಾಗರು,

ಈ ಇಂದ್ರಜಾಲ ವಿದ್ಯೆಯನ್ನು ಆರು ಕರ್ಮಗಳಲ್ಲಿ ವಿಭಾಗಿಸಿದ್ದೇನೆ, "ಶಾಂತಿ ವಶ್ಯ ಸ್ತಂಭನಾಗಿ, ವಿದ್ವೇಷಣೋಚ್ಚಾಟನೆ ತಥಾ। ಮಾರಣೊತನಿಸತಿ ಷಟ್ ಕರ್ಮಾಣಿ ಮನೀಷಿಣಾಃ ಅಂದರೆ ೧) ಶಾಂತಿಕರ್ಮ ೨) ವಶೀಕರಣ ಕರ್ಮ ೩) ಸ್ತಂಭನಕರ್ಮ ೪) ವಿದ್ವೇಷಣಕರ್ಮ ೫) ಉಚ್ಚಾಟನ ಕರ್ಮ ೬) ಮಾರಣಕರ್ಮ ಎಂದು ಈ ಆರುಬಗೆಯ ಕರ್ಮಗಳಿರುವವು. ರೋಗ, ಪಾಪ ಗ್ರಹ ಮೊದಲಾದವನ್ನು ಶಾಂತಗೊಳಿರುವದೇ ಶಾಂತಿ ಕರ್ಮ. ಸರ್ವ ಪ್ರಾಣಿಗಳನ್ನು ವಶಪಡಿಸಿಕೊಳ್ಳುವದೇ ವಶೀಕರಣಕರ್ಮವು, ಪ್ರಾಣಿಗಳ ಪ್ರವೃತ್ತಿಯನ್ನು ತಡೆದು ನಿಲ್ಲಿಸುವದು ಸ್ತಂಭನಕರ್ಮವಾಗಿರುವದು, ಎರಡು ವ್ಯಕ್ತಿಗಳಲ್ಲಿ ವಿರೋಧವುಂಟು ಮಾಡುವದೇ ವಿದ್ವೇಷಣಕರ್ಮವು, ಪರಸ್ಪರ ವ್ಯಕ್ತಿಗಳನ್ನು ದೂರಗೊಳಿಸುವದು ಉಚ್ಚಾಟನಕರ್ಮವು, ಪ್ರಾಣಹರಣ ಮಾಡುವದು ಮಾರಣಕರ್ಮವು

ಇದರ ಸಾಧನೆಯ ಬಗೆಗೆ ಯಾವದೇ ವೇಳೆ, ಕಾಲ, ನಕ್ಷತ್ರ ಮೊದಲಾದ ನಿರ್ಬಂಧಗಳಿಲ್ಲದಿದ್ದರೂ ಆ ನಿಯಮಗಳನ್ನು ಪಾಲಿಸುವದು ಸಾಧನೆಯ ಯಶಸ್ಸನ್ನು ಹೆಚ್ಚಿಸುವದು. ಯಾವದೇ ಸಾಧನಗಳ ಸಿದ್ಧಿಗಾಗಿ ಏಕಾಗ್ರಚಿತ್ತದಿಂದ ಮಂತ್ರಗಳನ್ನು ಜಪಿಸುವದು ಅವಶ್ಯವಿರುವದು. ಈ ಮಂತ್ರಜಪವು ಮೂರು ವಿಧವಾಗಿದ್ದು ವಾಚಕ, ಉಪಾಂಶು ಹಾಗೂ ಮಾನಸಿಕವೆಂದಿರುವದು. ಎರಡನೆಯವರಿಗೆ ಕೇಳಿಸುವಂತೆ ಮಾಡುವ ಜಪವು ವಾಚಕ ಜಪವೆನಿಸುವದು. ಹೃದಯ ಮಾತ್ರವಲ್ಲಿ ಮಾಡುವಜಪವು ಉಪಾಂಶು ಜಪವಾಗಿರುವದು ಕೇವಲ ಮನಸ್ಸಿನಲ್ಲಿ ಮಾತ್ರ ಉಚ್ಚರಿಸುವ ಜಪವು ಮಾನಸಿಕ ಜಪವೆನಿಸುವದು. ಈ ಮೂರು ಪ್ರಕಾರದ ಜಪಗಳೂ ಪಾಪನಾಶಕ ಮತ್ತು ಸಿದ್ಧದಾಯಕವಾಗಿರುವವು. ಶಾಂತಿಕರ್ಮದಲ್ಲಿ ಉಪಾಂಶಜಪ ವಶೀಕರಣ ಕರ್ಮದಲ್ಲಿ ಸ್ತಂಭನಕರ್ಮದಲ್ಲಿ ಮಾನಸಿಕ

ಜಪ, ಮಾರಣ ಉಚ್ಚಾಟನ ವಿದ್ವೇಷಣ ಕರ್ಮಗಳಲ್ಲಿ ವಾಚಿಕ ಜಪಮಾಡಬೇಕು ಸತ್ಕಾರ್ಯಕ್ಕಾಗಿ ಮಾನಸಿಕ ಇಲ್ಲವೇ ಉಪಾಂಶು ಉಳಿವ ಕಾರ್ಯಗಳಲ್ಲಿ ವಾಚಿಕಜಪ ಯೋಗ್ಯವೆನಿಸುವವು. ಮಾರಣ ಉಚ್ಚಾಟನ ಮತ್ತು ವಿದ್ವೇಷಣ ಕರ್ಮಗಳಲ್ಲಿ ಮಂತ್ರವನ್ನು ''ಹೊ ಫೇದಸ್ ಫಟ್'' ಎಂದು ಮಂತ್ರವನ್ನು ಪೂರ್ಣಗೊಳಿಸಬೇಕು, ಹವನ ಕಾರ್ಯದಲ್ಲಿ ಸ್ವಾಹಾ ಇಲ್ಲವೇ ನಮಃ ಎಂದು ಪೂರ್ಣಗೊಳಿಸಬೇಕು.

ವಿವಿಧ ಕರ್ಮಗಳಲ್ಲಿ ವಿವಿಧ ವಸ್ತುಗಳ ಮಾಲಾ ಬೇಕಾಗುವದು. ವಶೀಕರಣದಲ್ಲಿ ಹವಳ, ವಜ್ರ, ಮಣಿ. ರತ್ನಗಳ, ಆಕರ್ಷಣದಲ್ಲಿ ಹತ್ತಿದಂತದ ಮಾಲೆಯನ್ನು ವಿದ್ವೇಷಣದಲ್ಲಿ ಮನುಷ್ಯನ ಕೂದಲಿನಿಂದ ಕುದುರೆ ಹಲ್ಲು ಪೋಣಿಸಿದ ಮಾಲೆ ಮಾರಣದಲ್ಲಿ ಮನುಷ್ಯ ಗಂಧರ್ವರ ಹಲ್ಲಿನ ಮಾಲೆ ಧರ್ಮಕಾರ್ಯದಲ್ಲಿ ಶಂಖ ಇಲ್ಲವೇ ಮಣಿಯ ಮಾಲೆಯನ್ನುಪಯೋಗಿಸಬೇಕು. ರುದ್ರಾಕ್ಷಿಮಾಲೆಯಿಂದ ಜಪಿಸಿದ ಮಂತ್ರವು ಸಂಪೂರ್ಣ ಫಲಕಾರಿಯಾಗುವದು.

ವಶೀಕರಣದಲ್ಲಿ ಕಪ್ಪೆಯ ಚರ್ಮವನ್ನು ಆಕರ್ಷಣದಲ್ಲಿ ಚಿಗರೆಚರ್ಮವನ್ನು ಉಚ್ಚಾಟನದಲ್ಲಿ ಒಂಟೆಯ ಚರ್ಮವನ್ನು ಮಾರಣದಲ್ಲಿ ಕಪ್ಪೆಚರ್ಮ ಉಣ್ಣೆಬಟ್ಟೆ ಮತ್ತು ಇತರ ಕಾರ್ಯಗಳಲ್ಲಿ ಕುಶಾಶನವನ್ನುಪಯೋಗಿಸಬೇಕು. ಶಾಂತಿ ಕರ್ಮಕ್ಕಾಗಿ ಸಾಧಕರು ಸ್ವಸ್ತಿಕಾಸನವನ್ನು ವಶೀಕರಣಕ್ಕಾಗಿ ಭದ್ರಾಸನವನ್ನು ಸ್ತಂಭನಕರ್ಮಕ್ಕಾಗಿ ವಿಕಟಾಸನವನ್ನು ವಿದ್ವೇಷಣಕ್ಕಾಗಿ ಕುಕ್ಕುಟಾಸನವನ್ನು ಉಚ್ಚಾಟನಕ್ಕಾಗಿ ಅರ್ಧಸ್ವಸ್ತಿಕಾಸನವನ್ನು ಮಾರಣ ಕರ್ಮಕ್ಕಾಗಿ ವಿಕಟಾಸನವನ್ನು ಉಪಯೋಗಿಸಬೇಕು. ಯಾವದೇ ಶುಭಕರ್ಮಕ್ಕಾಗಿ ಪದ್ಮಾಸನವನ್ನುಪಯೋಗಿಸಬೇಕು. ಶಾಂತಿ ಕರ್ಮಕ್ಕಾಗಿ ಉತ್ತರಾಭಿಮುಖವಾಗಿ ಆಸನವನ್ನು ವಶೀಕರಣ ಮತ್ತು ಸ್ತಂಭನ ಕಾರ್ಯಕ್ಕಾಗಿ ಪೂರ್ವಾಭಿಮುಖವಾಗಿ ಆಸನವನ್ನು ವಿದ್ವೇಷಣ ಕರ್ಮಕ್ಕಾಗಿ ನೈರುತ್ಯಾಭಿಮುಖವಾಗಿ ಆಸನವನ್ನು ಉಚ್ಚಾಟನ ಕರ್ಮಕ್ಕಾಗಿ ವಾಯುವ್ಯ ಇಲ್ಲವೇ ದಕ್ಷಿಣಾಭಿಮುಖವಾಗಿ ಆಸನವನ್ನು ಮಾರಣಕರ್ಮಕ್ಕಾಗಿ ದಕ್ಷಿಣಾಭಿಮುಖವಾಗಿ ಆಸನನನ್ನು ಧನಪ್ರಾಪ್ತಿಗಾಗಿ ಪಶ್ಚಿಮಾಭಿ

ಮುಖನಾಗಿ ಪುಷ್ಟಿಕರ್ಮಕ್ಕಾಗಿ ಉತ್ತರಾಭಿಮುಖವಾಗಿ ಆಸನವನ್ನು ಹಾಕಿಕೊಂಡು ಕೂಡಬೇಕು.

ಪ್ರತಿಯೊಂದು ಕರ್ಮಕ್ಕೂ ಪ್ರತ್ಯೇಕವಾದ ಇಷ್ಟ ದೇವತೆಗಳಿರುವರು. ಅವರನ್ನು ಏಕಾಗ್ರಚಿತ್ತದಿಂದ ಧ್ಯಾನಿಸಿದರೆ ಅವರು ಪ್ರಸನ್ನರಾಗುವರು. ಅದರಿಂದ ಇಷ್ಟ ಕಾರ್ಯ ತ್ವರಿತವಾಗಿ ಸಿದ್ಧಿಯಾಗುವದು, ಮೊದಲು ಇಷ್ಟ ದೇವತೆಯನ್ನು ಪೂಜಿಸಿದ ನಂತರವೇ ಜಪತಪಾದಿಗಳನ್ನು ಪ್ರಾರಂಭಿಸಬೇಕು. ಶಾಂತಿಕರ್ಮದ ಇಷ್ಟದೇವತೆ ಸರಸ್ವತಿ, ವಶೀಕರಣ ಕರ್ಮದ ಇಷ್ಟ ದೇವತೆ ರತಿ, ಸ್ತಂಭನಕರ್ಮದ ಇಷ್ಟದೇವತೆ ಲಕ್ಷ್ಮಿ, ವಿದ್ವೇಷಣ ಕರ್ಮರ ಇಷ್ಟದೇವತೆ ಜೇಷ್ಠಾ, ಉಚ್ಚಾಟನ ಕರ್ಮದ ಇಷ್ಟದೇವತೆ ದುರ್ಗ ಮಾರಣಕರ್ಮದ ಇಷ್ಟದೇವತೆ ಭದ್ರಕಾಳಿಯಿರುವರು.

ಶಾಂತಿಕರ್ಮದ ಸಾಧನೆಯನ್ನು ಪ್ರಥಮ ಪ್ರಹರದಲ್ಲಿ, ವಶೀಕರಣ ಕಾರ್ಯವನ್ನ ಎರಡನೇ ಪ್ರಹರದಲ್ಲಿ, ಸ್ತಂಭನ ಕಾರ್ಯವನ್ನು ನಾಲ್ಕನೇ ಪ್ರಹರದಲ್ಲಿ ವಿದ್ವೇಷಣ ಉಚ್ಚಾಟನ ಕರ್ಮಗಳನ್ನು ಮೂರನೇ ಪ್ರಹರದಲ್ಲಿ ಮಾರಣ ಕರ್ಮವನ್ನು ನಾಲ್ಕನೇ ಪ್ರಹರದಲ್ಲಿ ನೆರವೇರಿಸಬೇಕು. ಅದೇ ರೀತಿ ಹೇಮಂತ ಋತುವಿನಲ್ಲಿ ವಶೀಕರಣ ಕಾರ್ಯವನ್ನು ಶಿಶಿರಋತುವಿನಲ್ಲಿ ಸ್ತಂಭನ ಕಾರ್ಯವನ್ನು ಗ್ರೀಷ್ಮಋತುವಿನಲ್ಲಿ ವಿದ್ವೇಷಣ ಕಾರ್ಯವನ್ನು ವರ್ಷಾಋತುವಿನಲ್ಲಿ ಉಚ್ಚಾಟನ ಕರ್ಮವನ್ನು ಶರದ ಋತುವನಲ್ಲಿ ಮಾರಣ ಕರ್ಮವನ್ನು ನೆರವೇರಿಸಬೇಕು.

ಶಾಂತಿಕರ್ಮದ ವರ್ಣ ಬಿಳಿಯದು, ವಶೀಕರಣದ್ದು ಕೆಂಪು, ಸ್ತಂಭನಕರ್ಮದ್ದು ಹಳದಿ, ವಿದ್ವೇಷಣ ಕರ್ಮದ್ದು ಕೆಂಪು, ಉಚ್ಚಾಟನ ಕರ್ಮದ್ದು ಹೊಗೆಬಣ್ಣ; ಮಾರಣ ಕರ್ಮದ್ದು ಕಪ್ಪು, ಹೀಗೆ ಇದ್ದು ವಸ್ತ್ರ ಹಾಗೂ ಇತರ ವಸ್ತುಗಳು ಅದೇ ಬಣ್ಣ ವಿರಬೇಕು. ಸೋಮವಾರ ಶಾಂತಿ ಕರ್ಮ, ಮಂಗಳವಾರ ವಿದ್ವೇಷಣ ಕರ್ಮ, ಬುಧವಾರ ವಶೀಕರಣ ಕರ್ಮ ಶನಿವಾರ ದಿನದಂದು ಸ್ತಂಭನ ಉಚ್ಚಾಟನ ಹಾಗೂ ಮಾರಣ ಕರ್ಮಗಳನ್ನು ಪ್ರಾರಂಭಿಸಬೇಕು, ಇಷ್ಟ ತಿಥಿ, ನಕ್ಷತ್ರಗಳನ್ನು ಗಮನಿಸಬೇಕು.

ಶಾಂತಿ ಕರ್ಮಕ್ಕಾಗಿ ಎಳ್ಳು, ತುಪ್ಪ, ಹಾಲು ಮತ್ತು ಮಾವಿನ ಸಮಿತ್ತಿ, ವಶೀಕರಣಕ್ಕಾಗಿ ಸಾಸಿವೆಯನ್ನು ಸ್ತಂಭನ ಕರ್ಮಕ್ಕಾಗಿ ತುಪ್ಪ, ಬೆಲಪತ್ರಿ, ವಿದ್ವೇಷಣ ಹಾಗೂ ಉಚ್ಚಾಟನ ಕರ್ಮಕ್ಕಾಗಿ ಚಿರೆಂಜಿ ಬೆಲ ಪತ್ರಿ ಮುದ್ದೆಯನ್ನು ಆಕರ್ಷಣ ಹಾಗೂ ಮಾರಣ ಕರ್ಮಕ್ಕಾಗಿ ಎಂಣೆ ಹಾಗೂ ಸಾಸಿವಿ, ಪುಷ್ಟಿಕರ್ಮಕ್ಕಾಗಿ ತುಪ್ಪ, ಬೆಲಪತ್ರಿ, ಧೂಪಸಮೇತ ಲಕ್ಷ್ಮಿ ಪ್ರಾಪ್ತಿಗಾಗಿ ಧೂಪದೀಪ ಮತ್ತು ಮಿಠಾಯಿ ಇವುಗಳ ಹವನ ಮಾಡ ಬೇಕು. ಯಾವದೇ ಶುಭಕಾರ್ಯಕ್ಕಾಗಿ ತುಪ್ಪ, ಎಳ್ಳು ಹಾಗೂ ಅಕ್ಕಿ ಮತ್ತು ಇತರ ಎಲ್ಲ ಕರ್ಮಗಳಿಗಾಗಿ ತುಪ್ಪ, ಗಂಧ, ಮಿಠಾಯಿ ಇವುಗಳ ಹವನ ಮಾಡಬೇಕು.

ಶಾಂತಿ ಕರ್ಮಕ್ಕಾಗಿ ನವರತ್ನ ಖಚಿತ ಬಂಗಾರದ ಕಲಶವನ್ನು ವಶೀ ಕರಣ, ಆಕರ್ಷಣ, ಸ್ತಂಭನ, ಮೋಹನ ಕರ್ಮಗಳಿಗೆ ಬೆಳ್ಳಿ ಕಲಶವನ್ನು ವಿದ್ವೇಷಣ ಮತ್ತು ಉಚ್ಚಾಟನ ಕರ್ಮಗಳಿಗೆ ಮಣ್ಣಿನ ಪಾತ್ರೆಯ ಕಲಶ ವನ್ನು ಮಾರಣ ಕರ್ಮಕ್ಕಾಗಿ ಕಬ್ಬಿಣ ಪಾತ್ರೆಯ ಕಲಶವನ್ನು ಸ್ಥಾಪಿಸ ಬೇಕು. ಸಾಧನೆಯನ್ನು ಪ್ರಾರಂಭಿಸಿದ ನಂತರ ಮಂತ್ರದಲ್ಲಿ ಸ್ವಲ್ಪವೂ ಲೋಪವಾಗದಂತೆ ವರ್ತಿಸಬೇಕು. ಬ್ರಹ್ಮಚರ್ಯ ಪಾಲಿಸಬೇಕು. ನೆಲದ ಮೇಲೆಯೇ ಮಲಗಬೇಕು. ಇಷ್ಟ ದೇವತೆಯನ್ನು ಧ್ಯಾನಮಾಡಬೇಕು.

ಸರ್ವ ಕಾರ್ಯಗಳಿಗೂ ೨, ೩, ೫, ೭, ೧೦, ೧೨, ೧೩ ಮತ್ತು ಕೃಷ್ಣ ಪಕ್ಷದ ಪ್ರತಿಪದೆ ಶುಭತಿಥಿಗಳು. ೧, ೪; ೬, ಮತ್ತು ೧೪ ಮತ್ತು ಅಮವಾಸ್ಯೆ ಅಶುಭ ತಿಥಿಗಳೆಂದು ತಿಳಿಯಬೇಕು. ಅದರಂತೆ ಸೋಮ ವಾರ, ಬುಧವಾರ, ಗುರುವಾರ ಮತ್ತು ಶುಕ್ರವಾರ ಶುಭ ವಾರಗಳು. ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಉತ್ತರಾ, ಹಸ್ತ, ಚಿತ್ತಾ, ಸ್ವಾತಿ, ಅನುರಾಧಾ, ಉತ್ತರಾಷಾಡಾ, ಶ್ರಾವಣ, ಧನಿಷ್ಠ, ಶತ ತಾರಕಾ, ಉತ್ತರ ಭಾದ್ರಪದ, ರೇವತಿ ನಕ್ಷತ್ರಗಳು ಶುಭನಕ್ಷತ್ರಗಳು. ಕನ್ಯಾ, ಮಿಥುನ, ಮಕರ ಮತ್ತು ತುಲಾಲಗ್ನಗಳು ಶುಭಲಗ್ನಗಳಾಗಿರುವವು

## ೨ ಶಾಂತಿ ಕರ್ಮ ಸಾಧನೆ

ಶಾಂತಿ ಕರ್ಮ ಸಾಧನೆಯಲ್ಲಿ ಶಾಂತಿ ಮಂತ್ರವು ಮುಖ್ಯವಾದುದಾಗಿ ರುವದು. ಈ ಮಂತ್ರದಿಂದ ಒಂದು ಲಕ್ಷಸಲ ಮಾನಸಿಕ ಜಪ ಮಾಡ ಬೇಕು ಅದರಿಂದ ಶಾಂತಿಯು ಪ್ರಾಪ್ತವಾಗುವದು. ಶುಭ ಕಾರ್ಯದ ಮೊದಲು ಮತ್ತು ನಂತರ ಈ ಶಾಂತಿ ಮಂತ್ರವನ್ನು ಜಪಿಸಿದಲ್ಲಿ ಶಾಂತ ರೀತಿಯಿಂದ ಸರ್ವ ಪ್ರಕಾರದ ಸಿದ್ಧಿಯಾಗುವದು. ಈ ಶಾಂತಿ ಮಂತ್ರ ಈ ರೀತಿಯಾಗಿರುವದು.

ಓಂ ಶ್ರೀ ಶಂಕರಾಯನಮಃ
ಓಂ ಶ್ರೀ ಕೈಲಾಸಪತಯೆನಮಃ
ಓಂ ಶ್ರೀ ಪಾರ್ವತಿಪತಯೆನಮಃ
ಓಂ ಶ್ರೀ ಶಾಂತಿಸಾಗರಾಯನಮಃ
ಓಂ ಶ್ರೀ ಸುಖದಾತಾಯನಮಃ
ಓಂ ಶ್ರೀ ವಿಷ್ಣುಹರ್ತಾಯನಮಃ
ಓಂ ಶಾಂತಿಃ ಶಾಂತಿಃ ಶಾಂತಿಃ

ಈ ಮುಂದೆ ಕಾಣಿಸಿದ ಮಂತ್ರವನ್ನು ಒಂದೇ ಸವನೆ ಜಪಿಸಿದಲ್ಲಿ ಸರ್ವ ಸಂಕಟಗಳಿಂದ ಮನುಷ್ಯನು ಮುಕ್ತನಾಗುವನು. ಕೆಂಪು ಹೂವಿನ ಮಾಲೆಯಿಂದ ಈ ಮಂತ್ರದ ಜಪ ಮಾಡಿದಲ್ಲಿ ಮಾಳದೇವಿಯು ಪ್ರಸನ್ನ ಳಾಗುವಳು. ನೂರು ಸಲ ಈ ರೀತಿ ಸಾಧನ ಮಾಡಿದಲ್ಲಿ ಅಜನ್ಮಪರ್ಯಂತ ಶುಭವಾಗುವದು. ದ್ರವ್ಯ ಲಾಭವಾಗುವದಲ್ಲದೇ ಮನೆಯಲ್ಲಿ ಯಾವದೇ ತರದ ತೊಂದರೆ ಬರುವದಿಲ್ಲ. ಆ ಮಂತ್ರ ಇದು.

ಓಂ, ಸ್ತ್ರೀಂ ಭ್ರಿಂ ಕ್ರೀಂ ಧ್ರೀಂ ಹ್ರಿಂ.

## ೩. ವಶೀಕರಣ ಸಾಧನೆ

ವಶೀಕರಣ ಪ್ರಯೋಗದಲ್ಲಿ ಇತರರನ್ನು ವಶಪಡಿಸಿಕೊಳ್ಳುವಂಥ ಶಕ್ತಿ ಯಿರುತ್ತದೆ. ಸಾಧಕನು ವಿಧಿಪೂರ್ವಕವಾಗಿ ಈ ಸಾಧನೆಯನ್ನು ಮಾಡಬೇಕು. ಇದರಲ್ಲಿ ಆಕರ್ಷಣ ಯಕ್ಷಿಣಿ ಮತ್ತು ಭೂತ ಸಾಧನೆ ಎಂದು ಮೂರು ವಿಧವಾಗಿದ್ದರೂ ಯಕ್ಷಿಣಿ ಹಾಗೂ ಭೂತ ಸಾಧನಗಳು ಕೆಲ ಮಟ್ಟಿಗೆ ಸ್ವತಂತ್ರವಾಗಿಯೂ ಇರುವವು.

ಓಂ ಹ್ರೀಂ ಸಃ ವಶಮಾನಯ ಸ್ವಾಹಾ ಎಂಬುದು ಇದರ ಬೀಜ ಮಂತ್ರವಾಗಿದ್ದು ಒಂದು ಸಾವಿರ ಸಲ ವಿಧಿಪೂರ್ವಕವಾಗಿ ಜಪಿಸಿದಲ್ಲಿ ಸಿದ್ಧಿ ದೊರೆಯುವದು. ವಶೀಕರಣ ಅಭಿಮಂತ್ರಿಸುವ ಕಾಲದಲ್ಲಿ ನಿರ್ದೇಶಿಸಿದ ಮೇರೆಗೆ ಈ ಮಂತ್ರ ಪ್ರಯೋಗವನ್ನು ಮಾಡಬೇಕು

ಎಲ್ಲರೊಂದಿಗೂ ಮಧುರ ರೀತಿಯಲ್ಲಿ ಮಾತನಾಡುವದೇ ವಶೀಕರಣದ ಮೂಲತತ್ವವಾಗಿದ್ದರೂ ಅದು ಎಲ್ಲರಿಗೂ ಸಾಧಿಸಲಾರದಾದ್ದರಿಂದ ತಂತ್ರ ಮಂತ್ರ ದ್ವಾರದಿಂದ ಸಾಧಿಸಿಕೊಳ್ಳಬೇಕಾಗುವದು.

ಮಂತ್ರಗಳು

### ವೇಶ್ಯಾ ವಶೀಕರಣ ಮಂತ್ರ

ಓಂ ಕನಕಕಾಮಿನಿ ಆತಾಬಾತಾ ಶೂಲ ರಾಜ ಪಾಂಚಾಲಪಾಂಚಾಲ ಓಂ ಯಂ ಯಂ ಯಃ ಯಂ.

ಬಿಲ್ವವೃಕ್ಷದ ಕೆಳಗೆ ಕಪ್ಪು ಚಿಗರಿ ಚರ್ಮದ ಮೇಲೆ ಕುಳಿತುಕೊಂಡು ವಿಷ್ಣುಕ್ರಾಂತ ಹೂವು ಮತ್ತು ಬಿಲಪತ್ರಿಗಳನ್ನು ತೆಗೆದುಕೊಂಡು ಈ ಮೇಲಿನ ಮಂತ್ರವನ್ನು ಅಭಿಮಂತ್ರಿಸಿ ಯಾವ ವೇಶ್ಯೆಯ ಮೇಲೆ ಅಭಿಲಾಷೆ ಇರುವದೋ ಆವಳ ಹೆಸರನ್ನು ತೆಗೆದುಕೊಂಡು ಆಹುತಿ ಕೊಡಲು ಅವಳು ನಿಶ್ಚಯವಾಗಿಯೂ ವಶವರ್ತಿಯಾಗುವಳು.

## ಸ್ವಾಮಿವಶೀಕರಣ ಮಂತ್ರ

ಓಂ ಭೂಂ ಭೂಂ ಭಾಂ ಭಾಂ ಡಃ

ಸೂರ್ಯಗ್ರಹಣದಂದು ನದಿ ದಂಡೆಗೆ ಹೋಗಿ ಅಂಜನ ಗಿಡದ ಕೆಳಗೆ ಕುಳಿತುಕೊಂಡು ಸಫರ ಚಂದದ ಮಾಲೆಯಿಂದ ಜಪಮಾಡ ತೊಡಗಿದರೆ ಸ್ವಾಮಿಯು ನಿಶ್ಚಿತವಾಗಿಯೂ ವಶವಾಗುವನು ಇದಕ್ಕಾಗಿ ಕುಶಾಸನ ವನ್ನು ಉಪಯೋಗಿಸಬೇಕು.

## ಪತಿ ವಶೀಕರಣ ಮಂತ್ರ

ಓಂ ಹ್ರೀಂ ಫ್ರೀಂ ಕ್ರೀಂ ಶ್ರೀಂ ಠಃ

ಪ್ರತಿಪದೆಯ ದಿವಸ ಕಪೋತಪಕ್ಷಿಯನ್ನು ಕೊಂದು ಅದರ ಮಾಂಸ ವನ್ನು ಈ ಮಂತ್ರದಿಂದ ಅಭಿಮಂತ್ರಿಸಿ ಪತಿಗೆ ಕೊಟ್ಟರೆ ಅವನು ಪತ್ನಿಯ ವಶದಲ್ಲಿಯೇ ನಿಶ್ಚಿತವಾಗಿಯೇ ಉಳಿಯುವನು.

## ಇನ್ನೊಂದು ಮಂತ್ರ

ಓಂ ನಮೋ ಮಹಾ ಯಕ್ಷಿಣ್ಯೈ ಮಮ ಪತೀಂ ಮೇ ವಶ್ಯಂ ಕುರು ಕುರು ಸ್ವಾಹಾ

ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಿದರೆ ಮಂತ್ರ ಸಿದ್ಧಿಯಾಗು ವದು. ಪತಿ ವಶೀಕರಣ ಪ್ರಯೋಗ ಕಾಲದಲ್ಲಿ ಈ ಮಂತ್ರವನ್ನು ೧೦೮ ಸಲ ಅಭಿಮಂತ್ರಿಸಿದರೆ ಪ್ರಯೋಗವು ಸಿದ್ಧಿಯಾಗುವದರಲ್ಲಿ ಸಂದೇಹವಿಲ್ಲ

## ಇನ್ನೊಂದು ಮಂತ್ರ

ಓಂ ದ್ರಾವಿಣಿ ಸ್ವಾಹಾ ಓಂ ಕಾಮಿನಿ ಸ್ವಾಹಾ·

ಹತ್ತುಸಾವಿರಸಲ ಜಪಿಸಿದಲ್ಲಿ ಈಮಂತ್ರದ ಸಿದ್ಧಿಯಾಗುವದು. ನಂತರ ಅಘಾಡಿ ಗಿಡದ ನಾಲ್ಕು ಕಡ್ಡಿಗಳನ್ನು ತೆಗೆದುಕೊಂಡು ೧೦೮ ಸಲ ಅಭಿ

ಮಂತ್ರಿಸಿ ನೀವು ಇಚ್ಛಿಸಿದ ವೇಶ್ಯೆಯ ಮನೆಯಲ್ಲಿ ಇಟ್ಟು ಬಂದರೆ ಸಾಕು ಅವಳು ನಿಮಗೆ ವಶವಾಗುವದರಲ್ಲಿ ಯಾವದೇ ರೀತಿ ಸಂದೇಹವಿಲ್ಲ.

## ರಾಜ ವಶೀಕರಣದ ಮತ್ತೊಂದು ಮಂತ್ರ

ಓಂ ಕ್ಲಿ ಸಃ ........ ಮೇವಶ ಕುರು ಕುರು ಸ್ವಾಹಾ.

ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಬೇಕು. ತದನಂತರ ಕೇಸರ, ಗೋರೋಚನ, ಚಂದನ, ಕರ್ಪುರಗಳನ್ನು ಸೇರಿಸಿ ಗಂಧ ಮಾಡಿ ಕೊಂಡು ಅದನ್ನು ಹಚ್ಚಿಕೊಂಡು ರಾಜನ ಸಮ್ಮುಖಕ್ಕೆ ಹೋಗಬೇಕು. ನಿಮ್ಮ ವಶದಲ್ಲಿ ಆ ರಾಜನು ಬರುವದರಲ್ಲಿ ಯಾವ ಸಂದೇಹವೂ ಇಲ್ಲ. ನಡುವಿನ ಸ್ಥಳದಲ್ಲಿ ನೀವು ಯಾವ ರಾಜನನ್ನು ವಶಮಾಡಿಕೊಳ್ಳಬೇಕೆಂದು ಬಯಸುವಿರೋ ಆ ರಾಜನ ಹೆಸರನ್ನು ಬರೆಯಿರಿ.

## ಸುಪಾರಿ ವಶೀಕರಣ ಮಂತ್ರ

ಓಂ ನಮೋ ಭಗವತೆ ವಾಸುದೇವಾಯ ತ್ರಿಲೋಚನಾಯ
ತ್ರಿಪು ಗ್ರಾಹನಾಯ (ಅಮುಕ) ಸ್ಯ ವಶಂ ಕುರು ಕುರು ಸ್ವಾಹಾ

ಈ ಮೇಲಿನ ಮಂತ್ರವನ್ನು ಅಡಿಕೆಯನ್ನು ತೆಗೆದುಕೊಂಡು ೧೦೮ ಸಲ ಉಚ್ಚರಿಸಿ ಅದನ್ನು ಅಭಿಮಂತ್ರಿಸಬೇಕು. ನೀವು ಯಾರನ್ನು ವಶಮಾಡಿ ಕೊಳ್ಳಬೇಕೆಂದು ಇಚ್ಛಿಸುತ್ತಿರುವಿರೋ ಅವರಿಗೆ ಈ ಅಭಿಮಂತ್ರಿತವಾದ ಅಡಿಕೆಯನ್ನು ತಿನ್ನಲು ಕೊಡಬೇಕು ಅಂದರೆ ಆ ವ್ಯಕ್ತಿಯು ಕೂಡಲೇ ನಿಮ್ಮ ವಶದಲ್ಲಿ ಬರುವನು. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲವೆಂದೂ ಅತ್ಯಂತ ಖಾತ್ರಿಯಾದುದೆಂದೂ ತಿಳಿಯಬೇಕು.

## ರಾಜಾ ವಶೀಕರಣ ಮಂತ್ರ

ಓಂ ನಮೋ ಭಾಸ್ಕರಾಯ ತ್ರಿಲೋಕಾತ್ಮನೆ ಮಹಿಪತಿ ವಶ್ಯಂ ಕುರು ಕುರು ಸ್ವಾಹಾ.

ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಿದರೆ ಸಿದ್ಧಿಯಾಗುವದು. ಪ್ರಯೋಗ ಸಮಯದಲ್ಲಿ ೧೦೮ ಸಲ ಜಪ ಮಾಡಬೇಕು ಮಂತ್ರ ಜಪದ ಸಮಯುವಲ್ಲಿ ಯಾವ ರಾಜನ ಹೆಸರನ್ನು ತೆಗೆದುಕೊಳ್ಳುವಿರೋ ಅವನು ನಿಮ್ಮ ವಶವರ್ತಿಯಾಗುವನು.

## ಇನ್ನೊಂದು ಮಂತ್ರ

ಉಹಿಂ ಸಂ (ಅಮುಕಮ) ವಶಂ ಸ್ವಾಹಾ

ಈ ಮಂತ್ರವನ್ನು ಒಂದು ಸಾವಿರ ಸಲ ವಿಧ್ಯುಕ್ತವಾಗಿ ಜಪಿಸಬೇಕು. ಜಪದ ಕಾಲದಲ್ಲಿ ಯಾವ ರಾಜನ ಹೆಸರನ್ನು ತೆಗೆದುಕೊಳ್ಳುವಿರೊ ಅವನು ನಿಮಗೆ ವಶನಾಗುವನೆಂಬುದರಲ್ಲಿ ಸಂದೇಹವೇನೂ ಇಲ್ಲ.

## ವಶೀಕರಣ ಮಂತ್ರ

ಓಂ ನಮೋ ನಾರಾಯಣಾಯ ಸರ್ವಲೋಕಾನಾಂ ಮಮ ವಶ್ಯಂ ಕುರು ಕುರು ಸ್ವಾಹಾ

ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಿದರೆ ಸಿದ್ಧಿಯಾಗುವದು. ಮಂತ್ರ ಸಿದ್ಧಿಯಾದ ನಂತರ ಪ್ರಯೋಗದ ಸಮಯದಲ್ಲಿ ೧೦೮ ಸಲ ಜಪಿಸಿದರೆ ಕಾರ್ಯ ಸಿದ್ಧಿಯಾಗುವದು. ಹೀಗೆ ಜಪಿಸಿದ ನಂತರವೇ ಪ್ರಯೋಗವನ್ನು ಅಭಿಮಂತ್ರಿಸಬೇಕು.

## ಸ್ತ್ರೀ ವಶೀಕರಣ ಮಂತ್ರ

ಓಂ ನಮೋ ಕಾಮಾಕ್ಷಿ ದೇವ್ಯೈ ಮೆ ವಶಂ ಕುರು ಕುರು ಸ್ವಾಹಾ

ಈ ಮಂತ್ರವನ್ನು ಮೊದಲು ೧ ಲಕ್ಷ ಸಲ ಜಪಿಸಿದ ನಂತರ ಮಂತ್ರ ಸಿದ್ಧಿಯಾಗುವದು. ಸ್ತ್ರೀ ವಶೀಕರಣ ಪ್ರಯೋಗ ಕಾಲದಲ್ಲಿ ೧೦೮ ಸಲ ಜಪಿಸಿ ಪ್ರಯೋಗವನ್ನು ಅಭಿಮಂತ್ರಿಸಬೇಕು. ನಡುವೆ ಸ್ಥಳದಲ್ಲಿ ವಶಮಾಡಿ

ಕೊಳ್ಳಬೇಕಾದ ಸ್ತ್ರೀಯ ಹೆಸರನ್ನು ತೆಗೆದುಕೊಳ್ಳಬೇಕು. ಆಗ ಆ ಸ್ತ್ರೀಯು ನಿಮ್ಮ ವಶವಾದಳೆಂದೇ ತಿಳಿಯಿರಿ.

## ಶತ್ರು ವಶೀಕರಣ ಮಂತ್ರ

ಓಂ ನಮೋ ಭಗವತೆ— ಸ್ಯೆ ಬುದ್ಧಿ ಸ್ತಂಭಯ ಶತ್ರುಫಟ್ ಸ್ವಾಹಾ

ಈ ಮಂತ್ರವನ್ನು ಹತ್ತು ಸಾವಿರ ಸಲ ಜಪಿಸಬೇಕು. ಆಗ ಸಿದ್ಧಿಯಾಗುವದು. ಜಪದ ಕಾಲದಲ್ಲಿ ಸ್ಥಳಬಿಟ್ಟಲ್ಲಿ ಶತ್ರುವಿನ ಹೆಸರನ್ನು ಸೇರಿಸಿಕೊಳ್ಳಬೇಕು. ಇದರಿಂದ ಶತ್ರುವಿನ ಬುದ್ಧಿ ನಿಂತು ಹೋಗಿ ಅವನು ನಿಶ್ಚಿತವಾಗಿಯೂ ನಿಮ್ಮ ವಶದಲ್ಲಿ ಬರುವನೆಂದು ತಿಳಿಯಬೇಕು.

ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಿ ಈ ಬ್ರಹ್ಮಾಂಡವನ್ನು ಉಪಾಸಿಸಿದರೆ ಶತ್ರು, ರಾಜ, ಕಳ್ಳರು ಹಾಗೂ ಸರ್ಪಗಳ ಭಯವು ಸ್ವಲ್ಪವೂ ಅನಿಸುವದಿಲ್ಲವೆಂಬುದು ನಿಶ್ಚಿತ ತಿಳಿಯಿರಿ.

## ಸ್ಥಳ ವಶೀಕರಣ ಮಂತ್ರ

ಓಂ ನಮೋ ಭಗವತೆ ಉಡ್ಡಾಮರೇಶ್ವರಾಮ ವಶ್ಯ ವಶ್ಯ ಮಿಲಿ ಮಿಲಿ ಠಂ ಠಃ

ಮೂರು ಸಾವಿರ ಸಲ ಈ ಮಂತ್ರವನ್ನು ಜಪಿಸಬೇಕು. ಬೆಲಪತ್ರಿ ಲಿಂಬಿಹಣ್ಣು, ಸೈಂದಲವಣ, ಉಪ್ಪು, ಇವುಗಳನ್ನು ಆಡಿನ ಹಾಲಿನಲ್ಲಿಕಲಿಸಿ ಗಂಧದಂತೆ ತಯಾರಿಸಿ ಈ ಮಂತ್ರವನ್ನು ಅಭಿಮಂತ್ರಿಸಿ ಅದರ ತಿಲಕನ್ನು ಹಚ್ಚಿದರೆ ಆ ಸ್ಥಳವು ವಶವಾಗುವದು ನಿಶ್ಚಿತವೆಂದು ತಿಳಿಯಬೇಕು.

## ಮನಮೋಹನ ಮಂತ್ರ

ಓಂ ಹ್ರೀಂ ಘೂಂ ಘೂಂ ಠಂ ಠಂ

ಪಾಡ್ಯದ ದಿವಸ ಚಿಂಚಿಕಾ ಪಕ್ಷಿಯನ್ನು ದೊರಕಿಸಬೇಕು. ಅದನ್ನು ಕಸ್ತೂರಿಯಲ್ಲಿ ಸೇರಿಸಿ ಗಂಧ ತಯಾರಿಸಬೇಕು, ಈ ಮೇಲಿನ ಮಂತ್ರ ದೊಂದಿಗೆ ಅದನ್ನು ಅಭಿಮಂತ್ರಿಸಿ ಅದರ ತಿಲಕವನ್ನು ಹಚ್ಚಿಕೊಂಡರೆ ದರ್ಶನ ಮಾತ್ರದಿಂದಲೇ ಸರ್ವವೂ ವಶವಾಗುವದು.

## ಸರ್ವವಶೀಕರಣ ಮಂತ್ರ

ಓಂ ಹ್ರೀಂ ಕ್ಲೀಂ — ಆಕರ್ಷಯ ಮಮ ವಶ್ಯಂ ಕುರು ಕುರು ಮೋಹಯ ಕುರು ಕುರು ಸ್ವಾಹಾ

ಕೇಶರ ಕುಂಕುಮ ಮತ್ತು ಗೋಪಿಚಂದನಗಳನ್ನು ಕಲಿಸಿ ಭೋಜ ಪತ್ರದ ಮೇಲೆ ಗೊಂಬೆ ಒಂದನ್ನು ತೆಗೆಯಬೇಕು. ಶುಭ ವೇಳೆಯಲ್ಲಿ ಕಾರ್ಯ ಸಿದ್ಧಿಯಾಗಬೇಕೆಂದು ಪೂಜೆ ಮಾಡಬೇಕು. ಯಶ ದೊರೆಯುವಂತೆ ಅನುಗ್ರಹಿಸಬೇಕೆಂದು ದೇವಿಯನ್ನು ಪ್ರಾರ್ಥಿಸಬೇಕು. ಶಾಂತಿಯು ದೊರೆಯಬೇಕೆಂದು ಪ್ರಜ್ವಲಿಸುವ ಅಗ್ನಿಯಲ್ಲಿ ಕಣಗಲಿ ಹೂವು, ಗುಗ್ಗುಳ, ತುಪ್ಪಗಳನ್ನು ಈ ಮಂತ್ರದಿಂದ ಅಭಿಮಂತ್ರಿಸಿ ಹೋಮವನ್ನು ಮಾಡಬೇಕು ೧೦೮ ಸಲ ಆಹುತಿಯನ್ನು ಕೊಡಬೇಕು. ಇದರಿಂದ ಸ್ತ್ರೀ ಪುರುಷ ಸರ್ವ ಲೋಕವೂ ನಿಶ್ಚಿತವಾಗಿ ವಶವಾಗುವದೆಂದು ತಿಳಿಯಬೇಕು.

ಪ್ರಯೋಗಗಳು

## ಸರ್ವವಶೀಕರಣ ಪ್ರಯೋಗ

ಬಿಲಪತ್ರಿ ಲಿಂಬಿಹಣ್ಣು. ಮತ್ತು ಉಪ್ಪನ್ನು ಆಡಿನ ಹಾಲಿನಲ್ಲಿ ಸೇರಿಸಿ ಅದರ ತಿಲಕವನ್ನು ಹಚ್ಚಿಕೊಂಡರೆ ಸರ್ವ ಲೋಕವು ವಶವಾಗುವ ದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಔದಂಬರ ಗಿಡದ ಟೊಂಗೆಯನ್ನು ತೆಗೆದುಕೊಂಡು ಅದರಿಂದ ಗಂಧ ವನ್ನು ತಯಾರಿಸಿ ಅದರ ತಿಲಕವನ್ನು ಹಚ್ಚಿಕೊಂಡಲ್ಲಿ ಅವರಿಗೆ ಸರ್ವವೂ

ದೊರೆಯುವದು. ಅವರ ದೃಷ್ಟಿ ಯಾವದರ ಮತ್ತು ಯಾರ ಮೇಲೆ ಬೀಳು ವದೋ ಅವು ಮತ್ತು ಅವರು ಸುಲಭವಾಗಿವಶವಾಗುವರೆಂದು ತಿಳಿಯಬೇಕು

ಗೋಪಿಚಂದನ ಮತ್ತು ಎಣ್ಣೆ ಜಿಡ್ಡು ಇವುಗಳ ಗಂಧವನ್ನು ಮಾಡಿ ತಿಲಕಯನ್ನು ಹಚ್ಚಿಕೊಂಡರೆ ದರ್ಶನ ಮಾತ್ರದಲ್ಲಿ ಅವರಿಗೆ ಸರ್ವವೂ ವಶ ವಾಗುವದು ನಿಶ್ಚಿತವೆಂದು ತಿಳಿಯಬೇಕು.

ಸಾಸುವೆ ಮತ್ತು ದೇವದಾರ ಸೇರಿಸಿ ಅವುಗಳ ಗುಳಿಗೆಗಳನ್ನು ಸಿದ್ಧ ಪಡಿಸಬೇಕು. ಮತ್ತು ಅವನ್ನು ಬಾಯಿಯಲ್ಲಿಟ್ಟುಕೊಂಡು ಯಾರೊಡನೆ ಮಾತಾಡುವಿರೋ ಅವರು ವಶವಾಗುವರೆಂಬುದು ನಿಶ್ಚಿತವೆಂದು ತಿಳಿಯ ಬೇಕು.

ಕೇಶರ, ಶುಂಠಿ, ಕುಂಕುಮ, ಮನಶೀಳ ಹಾಗೂ ಕೋಷ್ಟ ಹರತಾಳ ಇವುಗಳ ಚೂರ್ಣವನ್ನು ಸಿದ್ಧಪಡಿಸಿ ಒಂದಾಗಿ ಮಾಡಬೇಕು. ಯಾವದೊಂದ ರದಾದರೂ ರಕ್ತ ಸೇರಿಸಬೇಕು. ಅದನ್ನು ಟಿಳಕವಂತೆ ಹಚ್ಚಿಕೊಂಡಲ್ಲಿ ಸರ್ವಲೋಕವೂ ವಶವಾಗುವದು.

## ಸರ್ವ ವಶೀಕರಣದ ಇನ್ನೊಂದು ಮಂತ್ರ

ಓಂ ನಮೋ ಭಗವತಿ ಮಾತಂಗೇಶ್ವರಿ ಸರ್ವ ಮುಖಿ ಏಜನಿಸರ್ವೈಷಾಂ ಮಹಾಮಾತಂಗೆ ಕುಮಾರಿಕೆ ನಂದ ಏಕ ಜಿಂಹಾ ಸರ್ವಲೋಕ ವಶ್ಯಂಕುರು ಸ್ವಾಹಾ.

ಈ ಮಂತ್ರವನ್ನು ಹತ್ತು ಸಾವಿರ ಸಲ ಜಪಿಸಿ ಸಿದ್ಧಿ ಮಾಡಿಕೊಳ್ಳ ಬೇಕು. ಚಂದ್ರಗ್ರಹಣದ ಸಮಯದಲ್ಲಿ ಬಿಳಿ ವಿಷ್ಣುಕಾಂತದ ಎಲೆಯ ಅಂಜನವನ್ನು ಕಣ್ಣಿಗೆ ಹಚ್ಚಿಕೊಂಡು ಈ ಮಂತ್ರವನ್ನು ಜಪಿಸಿದಲ್ಲಿ ಮೂರು ಲೋಕದ ಸ್ತ್ರೀ ಪುರುಷರು ನಿಮ್ಮ ವಶವರ್ತಿಯಾಗುವರೆಂಬುದರಲ್ಲಿ ಯಾವ ತರಹದ ಸಂದೇಹವೂ ಬೇಡ.

ತುಪ್ಪ ವಿಳ್ಳೈದಎಲೆ ಹಾಗೂ ಭಾಂಗ ಬೀಜಳಗನ್ನು ಸೇರಿಸಿ ಅವುಗಳಿಂದ ಶಿದ್ಧವಾದ ತಿಲಕವನ್ನು ಹಣೆಗೆ ಹಚ್ಚಿಕೊಂಡಲ್ಲಿ ಅದು ಊತ್ತಮವಾದ ವಶಿಕರಣವಾಗಿರುವದು.

ಬಿಳಿಯ ದರ್ಭೆಯನ್ನು ಕರಿಯ ಆಕಳ ಹಾಲಿನಲ್ಲಿ ಎದ್ದಿ ಅದನ್ನು ಮೈಗೆಲ್ಲ ಲೇಪಿಸಿಕೊಳ್ಳಬೇಕು. ಆದರಿಂದ ಸರ್ವಲೋಕವು ನಿಮ್ಮ ವಶವರ್ತಿಯಾಗುವದರಲ್ಲಿ ಸಂದೇಹವಿಲ್ಲ.

ಬೆಲಪತ್ರಿ ಕಾಯಿಯನ್ನು ಆಡಿನ ಹಾಲಿನಲ್ಲಿ ಸೇರಿಸಿ ತೇಯಬೇಕು. ಆದರ ತಿಲಕವನ್ನು ಹಣೆಗೆ ಹಚ್ಚಿಕೊಳ್ಳಬೇಕು ಆಗ ನಿಮ್ಮ ದರ್ಶನ ಮಾತ್ರದಿಂದಲೇ ಸರ್ವವೂ ನಿಮ್ಮ ವಶದಲ್ಲಿ ಬರುವದೆಂದು ತಿಳಿಯಬೇಕು.

ತಿನ್ನುವ ಎಲೆ, ತುಳಸಿ ಎಲೆಗಳನ್ನು ಕರಿಯ ಆಕಳ ಹಾಲಿನಲ್ಲಿ ಸೇರಿಸಿ ಅದರ ಗಂಧವನ್ನು ಸಿದ್ಧಪಡಿಸಬೇಕು- ಅದರ ತಿಲಕವನ್ನು ನೀವು ಹಚ್ಚಿಕೊಳ್ಳಬೇಕು. ಆಗ ನಿಮ್ಮನ್ನು ಕಂಡವರೆಲ್ಲ ನಿಮ್ಮ ವಶದಲ್ಲಿ ಬರುವರೆಂಬುದು ಖಾತ್ರಿ.

ತಿನ್ನುವ ಎಲೆಯಲ್ಲಿ ಅಭಿಮಂತ್ರಿಸಿದ ಔದುಂಬರದ ಬೇರನ್ನು ಸೇರಿಸಿ ತಿನ್ನಲು ಕೊಡಬೇಕು ಅದನ್ನು ತಿಂದವರು ನಿಮ್ಮ ವಶದಲ್ಲಿ ತಪ್ಪದೇ ಬರುವರೆಂಬಲ್ಲಿ ಸಂದೇಹವಿಲ್ಲ.

## ಸ್ತ್ರೀ ವಶೀಕರಣ ಪ್ರಯೋಗ

ಗೋರೋಚನ ಕೇಶರ ಮತ್ತು ಚಂದನ ಇವುಗಳನ್ನು ಧತ್ತೂರಿರಸದಲ್ಲಿ ಮಿಶ್ರಣ ಮಾಡಿ ಮನುಷ್ಯನು ತನ್ನ ಲಿಂಗಕ್ಕೆ ಲೇಪಿಸಿಕೊಂಡು ಸ್ತ್ರೀ ಸಂಗ ಮಾಡಿದಲ್ಲಿ ಆ ಸ್ತ್ರೀಯು ಅವನ ಬಗ್ಗೆ ಅತ್ಯಂತ ಪ್ರೇಮವನ್ನು ತಾಳುವಳೆಂಬುದು ನಿಶ್ಚಿತ.

ಕರಿಉಪ್ಪು, ಗುಂಗಿಹುಳದ ಪಕ್ಕ, ನಾಗರಮೂಲ ಬೇರು, ಬಿಳಿಕಾಗಿ ಮತ್ತು ಕವಡಿ ಇವೆಲ್ಲವುಗಳ ಚೂರ್ಣವನ್ನು ಮಾಡಬೇಕು. ಈ ಚೂರ್ಣವನ್ನು

ಯಾವ ಸ್ತ್ರೀಯ ಮೇಲೆ ಹಾಕುವಿರೋ ಅವಳು ನಿಮ್ಮ ದಾಸಿಯಾಗುಳಿಯುವಳು ಅದರಲ್ಲಿ ಸಂದೇಹವೇ ಬೇಡ.

ಅತ್ತಿ ಗಿಡವ ಚಿಗುರನ್ನು ಎಲೆಮಾಡಿ ಅದರಲ್ಲಿ ಭಸ್ಮವನ್ನುಸೇರಿಸಿ ಅದರ ತಿಲಕವನ್ನು ಹಚ್ಚಿಕೊಂಡರೆ ಸರ್ವಜನರೂ ವಶೀಭೂತರಾಗುವರು.

ಶನಿವಾರದಂದು ಪುತಳಿಯನ್ನು ನಿರ್ಮಿಸಿ ಅದರಲ್ಲಿ ನೀವು ಇಚ್ಛಿಸಿದ ಸ್ತ್ರೀಯ ಹೆಸರನ್ನು ಬರೆದು ೧೦೮ ಸಲ ಮಂತ್ರವನ್ನು ಹೇಳಿ ಅವಳಿಗೆ ತೋರಿಸಿ ಪುತಳಿಯನ್ನು ಅವಳ ಎದೆಗೆ ಹತ್ತುವಂತೆ ಇರಿಸಿದರೆ ನೀವು ಇಚ್ಛಿಸಿದ ಸ್ತ್ರೀಯು ಪ್ರತ್ಯಕ್ಷವಾಗಿ ನಿಮ್ಮ ಬಳಿಗೆ ಬರುವಳು. ಇದರ ಮಂತ್ರವು 'ಓಂ ಭೂ ಭೂ ಭಾಂ ಭ, ಎಂದಿರುವದು.

ಚಿತಾಭಸ್ಮ, ಕೋಷ್ಠ, ವೆಖಂಡ, ಕೇಸರಿ ಮತ್ತು ಗೋಪಿಚಂದನಗಳನ್ನು ಸಮಭಾಗದಲ್ಲಿ ಸೇರಿಸಿ ಚೂರ್ಣವನ್ನು ಸಿದ್ಧಪಡಿಸಬೇಕು. ಈ ಚೂರ್ಣವನ್ನು ಅಭಿಮಂತ್ರಿಸಿ ಯಾವ ಸ್ತ್ರೀಯ ತಲೆಯ ಮೇಲೆ ಹಾಕುವಿರೋ ಆ ಸ್ತ್ರೀಯು ನಿಮ್ಮ ವಶವಾಗುವಳೆಂಬುದು ನಿಶ್ಚಿತವೆಂದು ತಿಳಿಯಿರಿ.

ಕರಿಕಮಲ ಮತ್ತು ಭೃಂಗದ ರೆಕ್ಕೆಯನ್ನು ಒಂದುಗೂಡಿಸಿ ಚೂರ್ಣವನ್ನು ಸಿದ್ಧಪಡಿಸಬೇಕು. ಆ ಚೂರ್ಣವನ್ನು ಅಭಿಮಂತ್ರಿಸಿ ಇಚ್ಛಿಸಿದ ಸ್ತ್ರೀಯ ತಲೆಯ ಮೇಲೆ ಹಾಕಿದಲ್ಲಿ ಅವಳು ಆ ಜನ್ಮ ವಶದಲ್ಲಿ ಉಳಿಯುವಳೆಂಬುದು ನಿಶ್ಚಿತವೆಂದು ತಿಳಿಯಿರಿ.

ರಾತ್ರಿ ಮುಗಿಯುತ್ತ ಬಂದ ಸಮಯದಲ್ಲಿ ಮನುಷ್ಯನು ಎಡಗೈಯಲ್ಲಿ ತನ್ನ ವೀರ್ಯ ತೆಗೆದುಕೊಂಡು ಇಚ್ಛಿತ ಸ್ತ್ರೀ ಚರಣಕ್ಕೆ ಲೇಪಿಸಿದಲ್ಲಿ ಆ ಸ್ತ್ರೀಯು ಆ ಪುರುಷನಿಗೆ ವಶವಾಗುವದರಲ್ಲಿ ಸಂದೇಹವಿಲ್ಲ.

ಬಾಳದ ಬೇರು, ಚಂದನ ಸೇರಿಸಿ ಜೇನುತುಪ್ಪದಲ್ಲಿ ಕಲಿಸಿ ಅದರ ಗಂಧವನ್ನು ಸಿದ್ಧಪಡಿಸಬೇಕು. ಅದರ ತಿಲಕವನ್ನು ಹಣೆಗೆ ಹಚ್ಚಿಕೊಂಡು ನೀವು ಯಾವ ಸ್ತ್ರೀಯನ್ನು ವಶಪಡಿಸಿಕೊಳ್ಳಬೇಕೆಂದು ಇಚ್ಛಿಸುತ್ತಿರುವಿರೋ

ಆ ಸ್ತ್ರೀಯ ಕುತ್ತಿಗೆಯ ಮೇಲೆ ಕೈಯಿರಿಸಬೇಕು, ಅಂದರೆ ಆ ಸ್ತ್ರೀಯು ನಿಮ್ಮ ವಶಕ್ಕೆ ಬರುವದರಲ್ಲಿ ಯಾವ ಸಂದೇಹವೂ ಇಲ್ಲ.

ಗೋಪಿಚಂದನ ಮತ್ತು ಸ್ತ್ರೀಯ ರಜವನ್ನು ಬಾಳೇಹಣ್ಣಿನ ರಸದಲ್ಲಿ ಸೇರಿಸಿ ಒಂದುಗೂಡಿಸಬೇಕು. ಅದರ ತಿಲಕವನ್ನು ಹಚ್ಚಿಕೊಂಡು ಯಾವ ಸ್ತ್ರೀಯನ್ನು ವಶಪಡಿಸಿಕೊಳ್ಳುವದಿದೆಯೋ ಅವಳ ಸಮ್ಮುಖದಲ್ಲಿ ಹೋಗಲು ಅವಳು ನಿಮ್ಮ ವಶದಲ್ಲಿ ಬರುವದಲ್ಲದೇ ನಿಮ್ಮ ಮಾತನ್ನು ಮೀರಿ ನಡೆಯುವದಿಲ್ಲ. ಇದರಲ್ಲಿ ಯಾವ ಸಂದೇಹವೂ ಇಲ್ಲ.

ನೀವು ವಶಪಡಿಸಿಕೊಳ್ಳಬೇಕಾದ ಸ್ತ್ರೀಯ ಮೇಲೆ ವಶೀಕರಣ ಪ್ರಯೋಗವನ್ನು ಮಾಡಬಯಸಿದಲ್ಲಿ ಅವಳ ಬಟ್ಟೆಯ ಒಂದು ತುಣಕನ್ನು ಸಂಪಾದಿಸಬೇಕು. ಔಡಲದ ಎಣ್ಣೆಯಲ್ಲಿ ಎದ್ದಿ ಅದರ ಕಾಡಿಗೆಯನ್ನು ಸಿದ್ಧಪಡಿಸಬೇಕು. ಈ ಕಾಡಿಗೆಯನ್ನು ನೀವು ಸ್ವತಃ ಹಚ್ಚಿಕೊಳ್ಳಬೇಕಲ್ಲದೆ ಅದನ್ನು ಅಭಿಮಂತ್ರಿಸಬೇಕು. ಸಮಯ ಸಾಧಿಸಿ ಅಭಿಮಂತ್ರಿತ ಕಾಡಿಗೆಯನ್ನು ಆ ಸ್ತ್ರೀಯ ದೇಹಕ್ಕೆ ಲೇಪಿಸಬೇಕು. ಆಗ ಆ ಸ್ತ್ರೀಯು ನಿಮ್ಮ ವಶದಲ್ಲಿ ಬರುವಳೆಂದೇ ತಿಳಿಯಬೇಕು. ಅವಳು ಸದಾಕಾಲ ನಿಮ್ಮ ಧ್ಯಾನವನ್ನೇ ಮಾಡತೊಡಗುವಳೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

ನಿಮ್ಮ ಕೈಕಾಲುಗಳ ಉಗುರಗಳನ್ನು ಬೆಂಕಿಯಲ್ಲಿ ಸುಟ್ಟು ಯಾವ ಸ್ತ್ರೀಯನ್ನು ನೀವು ವಶಪಡಿಸಿಕೊಳ್ಳಲು ಇಚ್ಛಿಸುವಿರೋ ಆ ಸ್ತ್ರೀಗೆ ಎಲೆಯಲ್ಲಿ ಅದರ ಕಾಡಿಗೆಯನ್ನು ಹಾಕಿ ತಿನ್ನಲು ಕೊಡಬೇಕು, ಅಂದರೆ ಅವಳು ನಿಮ್ಮ ವಶದಲ್ಲಿ ಬರುವದರಲ್ಲಿ ಸಂದೇಹವಿಲ್ಲ.

ಪುಷ್ಯ ನಕ್ಷತ್ರದ ಕಾಲಕ್ಕೆ ಅಗಸನ ಕಾಲ ಧೂಳಿಯನ್ನು ತಂದು ರವಿವಾರ ದಿನ ಮಾತ್ರ ನೀವು ವಶಪಡಿಸಿಕೊಳ್ಳಬೇಕಾದ ಸ್ತ್ರೀಯ ಹಣೆಗೆ ಸಾಯಂಕಾಲದ ಸಮಯದಲ್ಲಿ ಹಚ್ಚಿದರೆ ಆ ಸ್ತ್ರೀ ನಿಶ್ಚಿತವಾಗಿ ವಶವರ್ತಿಯಾಗುವಳು.

## ರಾಜಾ ವಶೀಕರಣ ಪ್ರಯೋಗ

ಧೂಪದೀಪ ನೈವೇದ್ಯಗಳೊಂದಿಗೆ ಸಾಧನೆಯನ್ನು ಮಾಡಿ ಪಾರ್ವತಿಯ ಚಿಂತನೆಯನ್ನು ಮಾಡಿದಲ್ಲಿ ಮತ್ತು ಇಪ್ಪತ್ತೊಂದು ಶನಿವಾರಗಳಂದು ೧೩೧ ಸಲ ವಶೀಕರಣ ಮಂತ್ರವನ್ನು ಜಪಿಸಿದಲ್ಲಿ ಮಂತ್ರಸಿದ್ಧಿಯಾಗಿ ರಾಜನು ನಿಮ್ಮ ವಶವರ್ತಿಯಾಗುವನು.

ಬಿಳಿ ರೇಶ್ಮೆ ವಸ್ತ್ರ ಧರಿಸಿ ಮುತ್ತಿನ ಮಾಲೆಯಿಂದ ವಶೀಕರಣ ಮಂತ್ರ ವನ್ನು ಜಪಿಸಬೇಕು. ದರ್ಭ ಮತ್ತು ರೂಪಕಾಮಿನಿ ಹೂಗಳನ್ನು ಆಹುತಿ ಕೊಡಬೇಕು. ಆಗ ನಿಶ್ಚಿತವಾಗಿಯೂ ರಾಜನು ವಶವಾಗುವನು.

ಕೇಶರ ಚಂದನ ಗೋಪಿಚಂದನಗಳನ್ನು ಕರ್ಪುರದೊಂದಿಗೆ ಮಿಶ್ರ ಮಾಡಿ ಆಕಳ ಹಾಲಿನಲ್ಲಿ ಸೇರಿಸಿ ಗಂಧವನ್ನು ತಯಾರಿಸಬೇಕು. ಅದರ ತಿಲಕವನ್ನು ಇಟ್ಟುಕೊಂಡು ಹೋದಲ್ಲಿ ರಾಜನು ವಶವಾಗುವನು.

ಕೇಶರ ಚಂದನ ಕರ್ಪುರ ಹಾಗೂ ತುಳಸಿ ರಸವನ್ನು ಕಪ್ಪು ಆಕಳ ಹಾಲಿನಲ್ಲಿ ಸೇರಿಸಿ ಅದರ ಗಂಧವನ್ನು ತಯಾರಿಸಬೇಕು. ಆ ಗಂಧವನ್ನು ಧರಿಸಿಕೊಂಡು ರಾಜನ ಸಮ್ಮುಖದಲ್ಲ ಹೋಗಲಾಗಿ ರಾಜನು ನಿಮ್ಮ ವಶ ವರ್ತಿಯಾಗುವನೆಂಬುದನ್ನು ಖಾತ್ರಿಯಿಂದ ತಿಳಿದುಕೊಳ್ಳಿರಿ

## ಪತಿ ವಶೀಕರಣ ಪ್ರಯೋಗ

ಗೋಪಿಚಂದನ, ಯೋನಿಯ ರಕ್ತ ಮತ್ತು ಬಾಳೆಹಣ್ಣಿನ ರಸವನ್ನು ಒಂದುಗೂಡಿಸಿ ಅದರ ತಿಲಕವನ್ನು ಹಚ್ಚಿಕೊಂಡು ಪತಿಯ ಸಮ್ಮುಖದಲ್ಲಿ ಹೋದಲ್ಲಿ ಆ ಸ್ತ್ರೀಯ ಪತಿಯು ನಿಶ್ಚಿತವಾಗಿಯೂ ಅವಳ ವಶವಾಗುವನು

ಹುಲಗಲಿ, ಬೆಲಪತ್ರಿ, ಗೋಪಿಚಂದನ ಮತ್ತು ಮನಶೀಳಗಳನ್ನು ಸಮಭಾಗದಲ್ಲಿ ತೆಗೆದುಕೊಂಡು ತಾಮ್ರದ ಪಾತ್ರೆಯಲ್ಲಿ ಏಳು ದಿವಸಗಳ ವರೆಗೆ ಎಣ್ಣೆಯಲ್ಲಿ ಹಾಕಿಡಬೇಕು. ಆ ತೇಲವನ್ನು ಯೋನಿಗೆ ಲೇಪಿಸಿ

ಕೊಂಡು ಪತಿ ಸಹವಾಸವನ್ನು ಮಾಡಿದಲ್ಲಿ ಅವಳ ಪತಿಯು ನಿಶ್ಚಿತವಾಗಿಯೂ ಅವಳ ವಶವರ್ತಿಯಾಗುವನೆಂಬುದರಲ್ಲಿ ಸಂದೇಹವಿಲ್ಲ

## ಶತ್ರುವಶೀಕರಣ ಪ್ರಯೋಗ

ಭೋಜಪತ್ರದ ಮೇಲೆ ಕೆಂಪು ಚಂದನದಿಂದ ಶತ್ರುವಿನ ಹೆಸರನ್ನು ಬರೆಯಬೇಕು. ಆ ಭೋಜಪತ್ರವನ್ನು ಜೇನುತುಪ್ಪದಲ್ಲಿ ಮುಳುಗಿಸಿಡಬೇಕು. ಅದರಿಂದ ನಿಮ್ಮ ಶತ್ರುವು ನಿಮ್ಮ ವಶನಾದದೆಂದೇ ತಿಳಿಯಿರಿ.

ರವಿವಾರವೇ ಅಮವಾಸ್ಯೆಯಿರುವಂತಹ ಯೋಗವೊಂದನ್ನು ಹುಡುಕಿಕೊಂಡು ಒಂದು ಕೋಲನ್ನು ತೆಗೆದುಕೊಂಡು ಅರ್ಧರಾತ್ರಿಯಲ್ಲಿ ಸ್ಮಶಾನಕ್ಕೆ ಹೋಗಬೇಕು. ಅಲ್ಲಿ ಅತ್ಯಂತ ಏಕಾಂತಿಕವಾಗಿ ವಿಧಿಪೂರ್ವಕವಾಗಿ ಅದನ್ನು ಪೂಜಿಸಬೇಕು. ಅದನ್ನು ಅಲ್ಲಿಯೇ ಸ್ಮಶಾನದಲ್ಲಿಡಬೇಕು, ಈ ರೀತಿ ಏಳು ದಿವಸಗಳ ವರೆಗೆ ಸಾಧನೆಯನ್ನು ನಡೆಸಿದ ನಂತರ ಅದನ್ನು ಮನೆಗೆ ತರಬೇಕು. ಅದನ್ನು ಏಳು ತುಂಡುಗಳಾಗಿ ಮಾಡಬೇಕು. ಅದರಲ್ಲಿ ಒಂದನ್ನು ನಿಮ್ಮ ಶತ್ರುಗಳ ಮನೆಯಲ್ಲಿರಿಸಿ ಬಂದರೆ ಆ ನಿಮ್ಮ ಶತ್ರುವು ನಿಮ್ಮ ವಶವಾದನೆಂದೇ ತಿಳಿಯಿರಿ ಅವನು ಕೊನೆಯವರೆಗೂ ನಿಮ್ಮ ಮಿತ್ರನಾಗಿಯೆ ಉಳಿಯುವನು.

ಭಾಂಗಿ ರಸದಲ್ಲಿ ಬಿಳಿ ಎಳ್ಳನ್ನು ಸೇರಿಸಿ ಗಂಧವನ್ನು ತಯಾರಿಸಬೇಕು. ಈ ಗಂಧವನ್ನು ಹಚ್ಚಿಕೊಂಡು ಶತ್ರುವಿನ ಸಮ್ಮುಖದಲ್ಲಿ ಹೋದಲ್ಲಿ ಅವನು ನಿಶ್ಚಯವಾಗಿಯೂ ನಿಮ್ಮ ವಶವರ್ತಿಯಾಗುವನೆಂದು ತಿಳಿಯಿರಿ.

ಒಂದು ಎಣ್ಣೆ ಹಾಗೂ ಯಾವದಾದರೊಂದು ಗಿಡದ ರಸವನ್ನು ಒಂದುಗೂಡಿಸಬೇಕು. ಅದನ್ನು ಅಭಿಮಂತ್ರಿಸಿ ಆದರತಿಲಕವನ್ನು ಹಚ್ಚಿಕೊಂಡು ಶತ್ರುವಿನ ಸಮ್ಮುಖದಲ್ಲಿ ಹೋಗಲು ಶತ್ರು ನಿಶ್ಚಯವಾಗಿಯೂ ನಿಮ್ಮ ವಶದಲ್ಲಿ ಬರುವನೆಂದು ತಿಳಿಯಬೇಕು.

ಮಂಗ ಇಲ್ಲವೇ ಗೂಗೆಯ ಮಲವನ್ನು ತೆಗೆದುಕೊಂಡು ಬಂದು ಅದನ್ನು ನೆರಳಿನಲ್ಲಿ ಒಣಗಿಸಿ ಅಭಿಮಂತ್ರಿಸಬೇಕು. ಒಂದು ಒಳ್ಳೆಪ್ರಸಂಗ

ವನ್ನು ಆರಿಸಿಕೊಂಡು ಅದನ್ನು ಶತ್ರುವಿನ ತಲೆಯ ಮೇಲೆ ಹಾಕಬೇಕು. ಆಗ ನಿಮ್ಮ ಶತ್ರುವು ಶಕ್ತಿಕುಂದಿದವನಾಗಿ ನಿಮ್ಮ ವಶದಲ್ಲಿ ಬರುವನೆಂಬುದ ರಲ್ಲಿ ಯಾವ ಸಂದೇಹವೂ ಇಲ್ಲ

### ವಶೀಕರಣ ಯಂತ್ರಗಳು

### ಸರ್ವ ವಶೀಕರಣ ಮಂತ್ರ

| | | | | |
|---|---|---|---|---|
| ಹರಿ | ಹರಿ | ಹರಿ | ಹರಿ | ಹರಿ |
| ಹರಿ | ಹರಿ | ಹರಿ | ಹರಿ | ಹರಿ |
| ಹರಿ | ಹರಿ | ಹರಿ | ಹರಿ | ಹರಿ |
| ಹರಿ | ಹರಿ | ಹರಿ | ಹರಿ | ಹರಿ |
| ಹರಿ | ಹರಿ | ಹರಿ | ಹರಿ | ಹರಿ |

ಓಂ ನಮೋ ನೃಸಿಂಹಾಯ ಸರ್ವ ಭಿಷ್ಟ ವಿನಾಶಾಯ ಸರ್ವ ಜನ ಮೋಹನಾಮು ಸರ್ವ ರಾಜ್ಯ ವಶ್ಯಂ ಕುರು ಕುರು ಸ್ವಾಹಾ.

ಈ ಯಂತ್ರವನ್ನು ಮೇಲಿನ ಮಂತ್ರ ವನ್ನು ಉಚ್ಚರಿಸುತ್ತ ೧ ಸಾವಿರ ದಿವಸ ಸಾವಿರಸಲ ಬರೆಯಬೇಕು. ಅದರಿಂದ ಈ ಮಂತ್ರದ ಸಿದ್ಧಿಯಾ ಗುವದು. ನಂತರ ಈ ಯಂತ್ರದ ಹವನ ಮಾಡಬೇಕು. ಅದರ ಭಸ್ಮ ವನ್ನು ತೆಗೆದುಕೊಂಡು ಎಂಟು ಸಲ ಅಭಿಮಂತ್ರಿಸಿ ಹಚ್ಚಿಕೊಂಡಲ್ಲಿ ಕೇವಲ ದರ್ಶನದಿಂದಲೇ ಸರ್ವಲೋಕವೂ ವಶವರ್ತಿಯಾರುವದು.

### ಸರ್ವ ಸಿದ್ಧಿ ಮಂತ್ರ

| | | | |
|---|---|---|---|
| ೫೭ | ೫೮ | ೯ | ೫೧ |
| ೩೩ | ೫೭ | ೪೮ | ೬೭ |
| ೮೬ | ೬೪ | ೪೪ | ೬೮ |
| ೧೫ | ೫೫ | ೬೫ | ೯ |

ಭೋಜಪತ್ರದ ಮೇಲೆ ಈ ಮಂತ್ರ ವನ್ನು ಬರೆಯಬೇಕು. ಗುಗ್ಗುಳ ಇತ್ಯಾದಿ ಧೂಪಗಳನ್ನು ಹಾಕಿ ಎಡಗೈಗೆ ಕಟ್ಟಿ ಕೊಂಡರೆ ಸರ್ವ ಕಾರ್ಯ ಸಿದ್ಧಿಯಾಗುವದು. ಈ ಯಂತ್ರವನ್ನು ಆಡಿನ ಹಾಲಿನಿಂದ ಕಾಗದದ ಮೇಲೆ ಬರೆಯಬೇಕು, ಧೂಪ ದೀಪಾದಿಗಳನ್ನು ಹಾಕಿ ಪೀಪಳ ಗಿಡದ

ಕೆಳಗೆ ಇಟ್ಟು ಬರಬೇಕು. ನಂತರ ಆ ಸ್ಥಾನದ ಮಣ್ಣನ್ನು ತಂದು ತಿಲಕ ಹಚ್ಚಿಕೊಂಡರೂ ಸಹ ಸರ್ವ ಕಾರ್ಯ ಸಿದ್ಧಿಯಾಗುವದು.

## ರಾಜಮಾನ ಯಂತ್ರ

| | | | |
|---|---|---|---|
| ೩೬ | ೫೮ | ೨ | ೩೯ |
| ೧ | ೮ | ೬೨ | ೯೧ |
| ೮೭ | ೫೪ | ೧ | ೮ |
| ೮ | ೫ | ೬೪ | ೮೫ |

ಈ ಮಂತ್ರವನ್ನು ಅಗರಬತ್ತಿಯಿಂದ ಬರೆದು ಭುಜಕ್ಕೆ ಕಟ್ಟಿಕೊಂಡರೆ ರಾಜ ಮಾನ್ಯತೆಯು ದೊರೆಯುವದು.

ಈ ಮಂತ್ರವನ್ನು ಗುಲಾಬ ರಸದಿಂದ ಭೋಜಪತ್ರದ ಮೇಲೆ ಬರೆದು ಭುಜಕೆ ಕಟ್ಟಿಕೊಂಡರೆ ರಾಜ ದರ್ಬಾರದಲ್ಲಿ ಆದರ ಸತ್ಕಾರದೊರೆಯುವದು.

## ಸರ್ವಸಿದ್ಧಿ ಯಂತ್ರ

| | | | |
|---|---|---|---|
| ೮ | ೧೫ | ೨ | ೮ |
| ೭ | ೩ | ೧೨ | ೧೧ |
| ೧೪ | ೯ | ೯ | ೧ |
| ೪ | ೮ | ೧೦ | ೧೩ |

ಈ ಯಂತ್ರವನ್ನು ಬಿದರಿನ ಲೇಖನಿ ಯಿಂದ ಬಿಳಿ ಚಂದನದಿಂದ ತಾಮ್ರದ ಪಾತ್ರೆಯ ಮೇಲೆ ಬರೆಯಬೇಕು. ಇದ ರಿಂದ ಸರ್ವ ಸಿದ್ಧಿಯಾಗುವದಲ್ಲದೇ ನೀವು ಬಯಸಿದ್ದೆಲ್ಲವೂ ವಶವಾಗುವದ ರಲ್ಲಿ ಸಂದೇಹವಿಲ್ಲ.

## ಇನ್ನೊಂದು ಸರ್ವಸಿದ್ಧಿ ಯಂತ್ರ

| | | | |
|---|---|---|---|
| ೭ | ೫೫ | ೮ | ೫೧ |
| ೮ | ೫ | ೮೧ | ೫೭ |
| ೮೬ | ೧೫ | ೬ | ೧ |
| ೫ | ೯ | ೩೪ | ೭೫ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಸಿದ್ಧಿಪ್ರಯೋಗದಿಂದ ಮಂತ್ರಸಿದ್ಧಿ ಮಾಡಿಕೊಂಡು ಮಂತ್ರವನ್ನು ನಿಮ್ಮ ಹತ್ತಿರ ಇರಿಸಿಕೊಂಡರೆ ನಿಮ್ಮ ಇಚ್ಛೆ ಗಳೆಲ್ಲವೂ ಪೂರ್ಣವಾಗುವವು. ಅದ ರಲ್ಲಿ ಯಾವ ಸಂಶಯವೂ ಬೇಡ.

ಇದಲ್ಲದೇ ಕಾಗದದ ಮೇಲೆ ಚಂದನದಿಂದ ಈ ಯಂತ್ರವನ್ನು ಬರೆದು ಅಶ್ವಗಂಧದಿಂದ ಅದಕ್ಕೆ ಧೂಪ ಹಾಕಿ ಯಾರಿಗಾದರೂ ಓದಲಿಕ್ಕೆ ಕೊಡಬೇಕು. ನೀವು ಯಾರಿಗೆ ಓದಲಿಕ್ಕೆ ಕೊಡುವಿರೋ ಅವರಿಂದ ನಿಮ್ಮ ಕಾರ್ಯವೆಲ್ಲವೂ ಸಂಪೂರ್ಣವಾಗಿ ಸಿದ್ಧವಾಗುವದು.

## ಸರ್ವಮನೋರಥ ಸಿದ್ಧಿ ಯಂತ್ರ

| | | | |
|---|---|---|---|
| ೮ | ೯೬ | ೧ | ೯೮ |
| ೧೯ | ೭೯ | ೯ | ೯೫ |
| ೧೦ | ೩ | ೯೪ | ೬ |
| ೯೧ | ೨ | ೯೯ | ೪ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಮಂತ್ರ ಸಿದ್ಧಿ ಪಡೆದುಕೊಂಡು ತಾಯಿತದಲ್ಲಿ ಹಾಕಿ ನಿಮ್ಮ ಬಳಿಯಲ್ಲಿಯೇ ಇರಿಸಿಕೊಂಡಲ್ಲಿ ನಿಮ್ಮ ಸರ್ವಮನೋರಥಗಳು ಈಡೇರುವವು.

## ಮಹಾರಾಜ ವಶೀಕರಣ ಯಂತ್ರ

| | | |
|---|---|---|
| ಮ್ಲಾ | ಮ್ಲಾ | ಮ್ಲಾ |
| ಮ್ಲಾ | ಹೆಸರು | ಮ್ಲಾ |
| ಮ್ಲಾ | ಮ್ಲಾ | ಮ್ಲಾ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಗೋರೋಚನದಿಂದ ಬರೆದು ತಾಯಿತದಲ್ಲಿ ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು. ಅದರಿಂದ ನೀವು ಬಯಸಿದ ಮಹಾರಾಜನು ನಿಮ್ಮ ವಶದಲ್ಲಿ ಬರುವನು.

## ರಾಜ ವಶೀಕರಣ ಯಂತ್ರ

| | | | |
|---|---|---|---|
| ೧ | ೮ | ೩ | ೨ |
| ೭ | ರಾಜನ ಹೆಸರು | | ೪ |
| ೯ | | | ೫ |
| ೬ | ೧೦ | ೧೧ | ೧ |

ಈ ಯಂತ್ರವನ್ನು ಬರೆದು ಮಧ್ಯದಲ್ಲಿ ರಾಜನ ಹೆಸರನ್ನು ಬರೆಯಬೇಕು. ಅವನ್ನು ಧರಿಸಿಕೊಂಡು ಯಾವ ರಾಜನನ್ನು ವಶಪಡಿಸಿಕೊಳ್ಳಬೇಕೆಂಬ ಇಚ್ಛೆಯಿದೆಯೋ ಆ ರಾಜನ ಬಳಿಗೆ ಹೋಗಬೇಕು. ಆಗ ಆ ರಾಜನು ನಿಶ್ಚಿತವಾಗಿ ವಶವಾಗುವದರಲ್ಲಿ ಸಂದೇಹವಿಲ್ಲ.

## ಇನ್ನೊಂದು ಯಂತ್ರ

| | | | |
|---|---|---|---|
| ೭ | ೬ | ೫ | ೨ |
| ೬ | ೨ | ೭ | ೫ |
| ೨ | ೬ | ೫ | ೭ |
| ೫ | ೭ | ೨ | ೬ |

ಈ ಯಂತ್ರವನ್ನು ಇಪ್ಪತ್ತು ಸಾವಿರ ಸಲ ಬರೆಯಬೇಕು. ಅಂದರೆ ನಿಮಗೆ ವಶಬೇಕೆಂದು ಬಯಸಿದ ರಾಜನು ನಿಮಗೆ ವಶವರ್ತಿಯಾಗುವನು.

## ಮತ್ತೊಂದು ಯಂತ್ರ

| | | | |
|---|---|---|---|
| ಹ್ರಿಂ | ಹ್ರಿಂ | ಹ್ರಿಂ | ಹ್ರಿಂ |
| ಹ್ರಿಂ | ಹೆಸರು | | ಹ್ರಿಂ |
| ಹ್ರಿಂ | ಹ್ರಿಂ | ಹ್ರಿಂ | ಹ್ರಿಂ |

ಈ ಯಂತ್ರವನ್ನು ಗೋಪಿಚಂದನ, ಕೇಸರ ಶ್ರೀಖಂಡ, ಹಾಲು, ಮೊಸರು ಮತ್ತು ಯಾರದಾದರೂ ರಕ್ತದಿಂದ ಭೋಜಪತ್ರದ ಮೇಲೆ ಬರೆಯಬೇಕು ಅದನ್ನು ಅನೇಕ ತರದ ಫಲಪುಷ್ಪಗಳಿಂದ

## ರಾಜ ಚಕ್ರವರ್ತಿ ವಶೀರಣ ಯಂತ್ರ

| | | | |
|---|---|---|---|
| ೩೬ | ೩೫ | ೫೨ | ೪೬ |
| ೧೪ | ೩೯ | ೫೩ | ೧ |
| ೪೪ | ೧೧ | ೩೫ | ೧೪ |
| ೫೪ | ೪೫ | ೩೩ | ೪೬ |

ಈ ಯಂತ್ರವನ್ನು ಅತ್ತಿಗಿಡದ ಕಟ್ಟಿಗೆಯಿಂದ ಬರೆದಲ್ಲಿ ರಾಜ-ಚಕ್ರವರ್ತಿಗಳು ಕೂಡ ವಶವಾಗುವರು. ಇದಲ್ಲದೇ ಈ ಮಂತ್ರವನ್ನು ಭೋಜಪತ್ರದ ಮೇಲೆ ಬಿಳಿ ಚಂದನದಿಂದ ಬರೆದು ಸಿದ್ಧಿಪ್ರಯೋಗದಿಂದ ಸಿದ್ಧಿ ಪಡೆದುಕೊಂಡು ರಾಜನ ಬಳಿಗೆ ಹೋಗಬೇಕು. ಆ ರಾಜನು ನಿಮ್ಮ ವಶವರ್ತಿಯಾಗುವನೆಂದು ತಿಳಿಯಿರಿ

## ರಾಜಾ ವಶೀಕರಣ ಯಂತ್ರ

| | | | | | |
|---|---|---|---|---|---|
| | ಅ | ಆ | ಇ | ಈ | |
| ಎ | | ವಂ | ವಂ | | ಉ |
| ಏ | ವಂ | ಹೆಸರು | | ವಂ | ಊ |
| ಐ | ವಂ | | | ವಂ | ಋ |
| ಒ | | ವಂ | ವಂ | | ೠ |
| | ಅಃ | ಅಂ | ಔ | ಓ | |

ಈ ಯಂತ್ರವನ್ನು ಚಂದನದಿಂದ ಬರೆದು ಮಧ್ಯದಲ್ಲಿ ಹೆಸರು ಬರೆಯಬೇಕು. ಬಿಳಿವಸ್ತ್ರದ ಮೇಲಿರಿಸಿ ಚಮೇಲಿ ಹೊಮ ಚಂದನಗಳಿಂದ ಈ ಯಂತ್ರವನ್ನು ಪೂಜಿಸಬೇಕು. ಈ ರೀತಿ ಏಳು ದಿವಸ ಮಾಡಬೇಕು. ಅನಂತರ ಕೃಷ್ಣಪಕ್ಷ ತ್ರಯೋದಶಿಯೆಂದು ಅರ್ಧರಾತ್ರಿಯಲ್ಲಿ ಉತ್ತರಾಭಿಮುಖವಾಗಿ ಈ ಯಂತ್ರದ ಪೂಜೆಯನ್ನು ಮಾಡಬೇಕು. ಬಡ ಬಗ್ಗರಿಗೆ ಊಟಕ್ಕೆ ಹಾಕಬೇಕು. ಈ

ಯಂತ್ರವನ್ನು ಬೆಳ್ಳಿ ಬಂಗಾರ ಇಲ್ಲವೇ ತಾಮ್ರದ ತಾಯಿತದಲ್ಲಿ ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು. ಅಂದರೆ ರಾಜನು ನಿಶ್ಚಿತವಾಗಿಯೂ ನಿಮ್ಮ ವಶವಾಗುವನೆಂದು ತಿಳಿಯಬೇಕು.

## ಸ್ತ್ರೀ ವಶೀಕರಣ ಯಂತ್ರ

| | | | |
|---|---|---|---|
| ೩೩ | ೨೭ | ೮ | ೮ |
| ೮ | ೯ | ೯ | ೨೬ |
| ೮೫ | ೭೨ | ೯೪ | ೧ |
| ೭ | ೫ | ೯೯ | ೨೪ |

ಈ ಯಂತ್ರವನ್ನು ಸ್ತ್ರೀ ಯೋನಿಯ ರಜಸ್ಸಿನಿಂದ ಇಲ್ಲವೇ ಚಂದನದಿಂದ ಕಾಗದ ಕೈಮೇಲೆ ಬರೆಯಬೇಕು. ಅದನ್ನು ಸ್ತ್ರೀಗೆ ತೋರಿಸಿದಲ್ಲಿ ಆವಳು ನಿಮಗೆ ವಶವಾಗುವಳು.

ಈ ಯಂತ್ರವನ್ನು ಕೆಂಪು ಕಾಗದದ ಮೇಲೆ ಚಂದನದಿಂದ ಬರೆಯಬೇಕು. ಯಾವ ಸ್ತ್ರೀಯನ್ನು ವಶಪಡಿಸಿಕೊಳ್ಳಬೇಕಾಗಿರುವದೋ ಅವಳ ಸೀರೆಯಲ್ಲಿ ಬಚ್ಚಿಡಬೇಕು. ಅಂದರೆ ಅವರ ಮನೋರಥವು ನಿಶ್ಚಿತವಾಗಿಯೂ ಈಡೇರುವದು.

## ಮತ್ತೊಂದು ಯಂತ್ರ

| | | | |
|---|---|---|---|
| ಓಂ | ಓಂ | ಓಂ | ಓಂ |
| ಓಂ | ವಶ ಮಾಡಿ ಕೊಳ್ಳುವವರ ಹೆಸರು | | ಓಂ |
| ಓಂ | | | ಓಂ |
| ಓಂ | | | ಓಂ |

ಈ ಯಂತ್ರವನ್ನು ರವಿವಾರ ಇಲ್ಲವೇ ಮಂಗಳವಾರ ಕಮಲ ಬೀಜ ಮತ್ತು ಅಷ್ಟಗಂಧಗಳಿಂದ ಸಿದ್ಧಪಡಿಸಿದ ಮಸಿಯಿಂದ ಉಣ್ಣೆಯ ವಸ್ತ್ರದ ಮೇಲೆ ಬರೆಯಬೇಕು. ವಿಧ್ಯುಕ್ತವಾಗಿ ಪೂಜಿಸಿ ಖೀರದ ಹವನ ಮಾಡಬೇಕು. ಹನ್ನೊಂದು ದಿವಸ ಈ ರೀತಿ ಮಾಡಿ ದ್ವಾದಸಿಯೆಂದು ಸಿದ್ಧಿ ಪೂರ್ತಿಗೊಳಿಸಿದಲ್ಲಿ ನೀವು ಯಾವ ಸ್ತ್ರೀಯ ಹೆಸರನ್ನು ಬರೆದಿರುವಿರೋ ಅವಳು ಅವಶ್ಯವಾಗಿ ನಿಮ್ಮ ವಶವಾಗುವಳು.

## ಪುರುಷ ವಶೀಕರಣ ಯಂತ್ರ

| | | | |
|---|---|---|---|
| ೩೩ | ೬೦ | ೧ | ೮ |
| ೭ | ೬ | ೩೭ | ೩೬ |
| ೩೯ | ೩೪ | ೯ | ೧ |
| ೪ | ೬ | ೩೫ | ೩೮ |

ಈ ಯಂತ್ರವನ್ನು ರೊಟ್ಟಿಯ ಮೇಲೆ ಬರೆದು ಅದನ್ನು ಅಭಿಮಂತ್ರಿಸಬೇಕು. ಒಂದು ಕರಿಯ ನಾಯಿಗೆ ಇಚ್ಛಿಸಿದ ಪುರುಷನ ಹೆಸರನ್ನು ಇರಿಸಿ ಈ ರೊಟ್ಟಿಯನ್ನು ಆ ನಾಯಿಗೆ ತಿನಿಸಬೇಕು. ಆಗ ಆ ಪುರುಷನು ನಿಶ್ಚಯವಾಗಿಯೂ ನಿಮ್ಮ ವಶವಾಗುವನೆಂದೇ ತಿಳಿಯಬೇಕು.

## ಮತ್ತೊಂದು ಯಂತ್ರ

| | | | |
|---|---|---|---|
| ೧ | ೬೫ | ೨ | ೯೨ |
| ೭೫ | ೯ | ೧ | ೫೨ |
| ೯೭ | ೧೮ | ೭೩ | ೯೧ |
| ೬ | ೭ | ೩೯ | ೪೧ |

ಈ ಯಂತ್ರವನ್ನು ಎಲೆಯ ರಸದಲ್ಲಿ ಬರೆದು ಭುಜಕ್ಕೆ ಕಟ್ಟಿಕೊಂಡರೆ ಸ್ತ್ರೀಯು ಇಚ್ಛಿಸಿದ ಪುರುಷನು ಅವಳ ವಶದಲ್ಲಿ ನಿಸ್ಸಂದೇಹವಾಗಿ ಬರುವನು.

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆದು ಸ್ತ್ರೀಯು ತನ್ನ ಸೀರೆಯಲ್ಲಿ ಗಂಟು ಕಟ್ಟಿಕೊಂಡರೆ ಅವಳ ಪತಿಯು ಅವಳ ವಶದಲ್ಲಿಯೇ ನಿಶ್ಚಿತವಾಗಿಯೂ ಉಳಿಯುವನು ಇದಕ್ಕೆ ಯಾವ ತರದ ಸಂದೇಹವೂ ಬೇಡ.

## ಇನ್ನೊಂದು ಯಂತ್ರ

| | | | |
|---|---|---|---|
| ೬೩ | ೪೭ | ೨ | ೫ |
| ೮ | ೩ | ೬೯ | ೩೭ |
| ೩೯ | ೩೪ | ೯ | ೧ |
| ೪ | ೬ | ೩೫ | ೩೮ |

ಈ ಯಂತ್ರವನ್ನು ಉರುಳಿಗಡ್ಡಿ ರಸದಿಂದ ಸ್ತ್ರೀಯು ರೊಟ್ಟಿಯ ಮೇಲೆ ಬರೆದು ತಾನು ವಶಪಡಿಸಿ ಕೊಳ್ಳಬೇಕೆಂದು ಇಚ್ಛಿಸಿದ ಪುರುಷನಿಗೆ ತಿನ್ನಿಸಬೇಕು. ಆಗ ಆ ಪುರುಷನು ಈ ಸ್ತ್ರೀಯ ಮಾತನ್ನು ಮೀರುವದಿಲ್ಲ ಮತ್ತು ಅವಳ ವಶದಲ್ಲಿ ಸಂಪೂರ್ಣವಾಗಿ ಉಳಿಯುವನು.

## ಸ್ತ್ರೀ ವಶೀಕರಣ ಯಂತ್ರ

| | | | |
|---|---|---|---|
| ೫೯ | ೬೬ | ೨ | ೮ |
| ೭ | ೩ | ೬೩ | ೬೨ |
| ೬೫ | ೬೦ | ೯ | ೧ |
| ೪ | ೬ | ೬೧ | ೬೪ |

ಈ ಯಂತ್ರವನ್ನು ಪುಷ್ಯ ನಕ್ಷತ್ರದಂದು ಸಿದ್ಧಪಡಿಸಬೇಕಾಗುವದು. ಭೋಜ ಪತ್ರದ ಮೇಲೆ ಸ್ತ್ರೀಯ ಮೊಲೆ ಹಾಲಿನಿಂದ ಇದನ್ನು ಬರೆಯಬೇಕು, ಯಂತ್ರವನ್ನು ಬರೆದ ನಂತರ ಅದನ್ನು ಅಭಿಮಂತ್ರಿಸಬೇಕು. ನಂತರ ಯಾವ ಸ್ತ್ರೀಯನ್ನು ವಶಪಡಿಸಿಕೊಳ್ಳಬೇಕೆಂದು ನೀವು ಇಚ್ಛಿಸುವಿರೋ ಆ ಸ್ತ್ರೀಯ ಸೀರೆ ಅಥವಾ ಬೇರಾವದಾದರೊಂದು ವಸ್ತ್ರವನ್ನು ದೊರಕಿಸಿ ಅದಕ್ಕೆ ಈ ಯಂತ್ರವನ್ನು ಕಟ್ಟಬೇಕು. ಆಗ ಆ ಸ್ತ್ರೀಯು ಸಂಪೂರ್ಣ ವಶಳಾಗಿ ಬರುವಳಲ್ಲದೇ ನಿಮ್ಮ ಮಾತನ್ನು ಮೀರುವದಿಲ್ಲವೆಂಬುದು ನಿಶ್ಚಿತವೆಂದು ತಿಳಿಯಬೇಕು.

## ಪತಿ ವಶೀಕರಣ ಯಂತ್ರ

| | | | |
|---|---|---|---|
| ೭ | ೩ | ೬೧ | ೬೦ |
| ೪ | ೬ | ೬೯ | ೯೨ |
| ೫೭ | ೫ | ೨ | ೮ |
| ೬೩ | ೫೮ | ೯ | ೧ |

ಸ್ತ್ರೀಯು ತನ್ನ ಯೋನಿಯ ರಕ್ತದಿಂದ ಈ ಯಂತ್ರವನ್ನು ತನ್ನ ಅಂಗೈಯಲ್ಲಿ ಬರೆಯಬೇಕು. ಮತ್ತು ಆ ಯಂತ್ರವಿರುವ ಅಂಗೈಯನ್ನು ತನ್ನ ಪತಿಗೆ ತೋರಿಸಬೇಕು. ಅಂದರೆ ಅವಳ ಪತಿಯು ಅವಳಿಗೆ ನಿಶ್ಚಯವಾಗಿಯೂ ವಶವರ್ತಿಯಾಗುವನು. ಇದರಲ್ಲಿ ಯಾವ ಸಂದೇಹಕ್ಕೆ ಆಸ್ಪದವಿರುವದಿಲ್ಲ.

## ಜೂಜುಗೆಲ್ಲುವ ಯಂತ್ರ

| | | | |
|---|---|---|---|
| ೮೦ | ೬೪ | ೮ | ೧೬ |
| ೪೬ | ೧೪ | ೬೪ | ೪೬ |
| ೬೪ | ೪೨ | ೧೨ | ೧೨ |
| ೮೪ | ೧೫ | ೬೫ | ೯೪ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಗೋರೋಚನ, ಕೇಶರ ಮತ್ತು ಅಶ್ವಗಂಧದಿಂದ ಬರೆಯಬೇಕು. ಸ್ವಾತಿ ನಕ್ಷತ್ರದ ಸಮಯದಲ್ಲಿಯೇ ಇದನ್ನು ಬರೆಯಬೇಕೆಂಬುದನ್ನು ಲಕ್ಷ್ಯದಲ್ಲಿಡಿರಿ. ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಎಡಗೈಗೆ ಕಟ್ಟಿಕೊಂಡಲ್ಲಿ ಜೂಜಿನಲ್ಲಿ ಅತ್ಯಂತ ಸಹಜವಾಗಿ ನೀವು ಗೆಲ್ಲುವಿರಿ. ಅದಕ್ಕೆ ಯಾವ ರೀತಿಯ ಸಂಶಯಪಡಬೇಕಾಗಿಲ್ಲ.

## ಇನ್ನೊಂದು ಯಂತ್ರ

ಈ ಯಂತ್ರವನ್ನು ದೀಪಾವಳಿ ದಿನದ ರಾತ್ರಿ ಯಂದು ಮತ್ತು ಸ್ವಾತಿ ನಕ್ಷತ್ರವಿರುವ ಸಮಯವನ್ನು ನೋಡಿಕೊಂಡು ಬರೆಯಬೇಕು ಹೀಗೆ ಬರೆದ ಯಂತ್ರವನ್ನು ಕೈಯಲ್ಲಿ ಕಟ್ಟಿಕೊಳ್ಳಬೇಕು. ಆನಂತರ ಜೂಜು ಆಡಬೇಕು. ಇದರಿಂದ ಆಟದಲ್ಲಿ ಸಂಪೂರ್ಣವಾಗಿ ಯಶಸ್ಸು ಸಿಕ್ಕುವದರಲ್ಲೂ ಸಂದೇಹವಿಲ್ಲ.

| | | | |
|---|---|---|---|
| ೬೦ | ೬೨ | ೩ | ೨ |
| ೬ | ೭ | ೬೪ | ೫ |
| ೬೬ | ೬೧ | ೮ | ೧ |
| ೬ | ೫ | ೮೩ | ೬೫ |

## ವ್ಯಾಪಾರವು ಹೆಚ್ಚುವದಕ್ಕಾಗಿರುವ ಯಂತ್ರ

| | | | |
|---|---|---|---|
| ೨ | ೮೦ | ೩ | ೨ |
| ೬ | ೭ | ೨೬ | ೨೬ |
| ೨೯ | ೨೪ | ೮ | ೧ |
| ೪ | ೫ | ೨೪ | ೪೦ |

ದೀಪಾವಳಿಯ ದಿನದಂದು ಈ ಯಂತ್ರವನ್ನು ಅಂಗಡಿಯ ಗೋಡೆಯ ಮೇಲೆ ಬರೆಯಬೇಕು. ಆಗ ವ್ಯಾಪಾರದಲ್ಲಿ ಬಹಳಷ್ಟು ವೃದ್ಧಿಯಾಗುವದರಲ್ಲಿ ಸಂದೇಹವಿಲ್ಲ. ಇದು ಬಹಳೇ ಪ್ರಭಾವಶಾಲಿಯಾದ ಯಂತ್ರವಾಗಿರುವದು. ವ್ಯಾಪಾರಸ್ಥರು ಇದನ್ನು ತಮ್ಮ ಅಂಗಡಿಗಳ ಗೋಡೆಗಳ ಮೇಲೆ ವಿಧ್ಯುಕ್ತ ರೀತಿಯಲ್ಲಿ ಬರೆದಲ್ಲಿ ಅವರ ವ್ಯಾಪಾರವು ಬಹಳಷ್ಟು ಹೆಚ್ಚುವದೆಂಬಲ್ಲಿ ಯಾವದೇ ಸಂದೇಹವಿಲ್ಲ.

## ಸ್ಥಳ ವಶೀಕರಣ ಯಂತ್ರ

| | | | | |
|---|---|---|---|---|
| ಓಂ | ವ | ಜೆ | ಹ್ರಿಂ | ಊಂ |
| ಊಂ | ಹ್ರಿಂ | ಓಂ | ಊಂ | ಊಂ |
| ವಂ | ಉಂ | ಜಗತ | ವಂ | ಹ್ರಿಂ |

ಈ ಯಂತ್ರವನ್ನು ಊದುಬತ್ತಿಯಿಂದ ಭೋಜಪತ್ರದ ಮೇಲೆ ಬರೆಯಬೇಕು. ಕರ್ಪುರ, ಕಸ್ತೂರಿ ಗೋಪಿಚಂದನ ಮತ್ತು ಚಂದನ ಇವೆಲ್ಲವುಗಳ ಮಸಿಯನ್ನು ಸಿದ್ಧಪಡಿಸಿ ಈ ಯಂತ್ರವನ್ನು ಬರೆಯಲು ಅದನ್ನು ಉಪಯೋಗಿಸಬೇಕು. ಮೂರು ದಿನಗಳವರೆಗೆ ಈ ಯಂತ್ರವನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಆನಂತರ ಒಂದು ತಾಯಿತದಲ್ಲಿ ಹಾಕಿ ಕೈಗೆ ಕಟ್ಟಿಕೊಳ್ಳಬೇಕು. ಆದರಿಂದ ಸರ್ವ ಸ್ಥಳ ವಶವಾಗುವದು.

## ಶತ್ರು ವಶೀಕರಣ ಯಂತ್ರ

| | | | |
|---|---|---|---|
| ಜು | ಜು | ಜು | ಜು |
| ಜು | ಜು | ಜು | ಜು |
| ಜು | ಜು | ಜು | ಜು |
| ಜು | ಜು | ಜು | ಜು |

ಈ ಯಂತ್ರವನ್ನು ವಿಧ್ಯುಕ್ತ ರೀತಿಯಲ್ಲಿ ಬರೆದು ಆಕಳ ಹಾಲಿನಲ್ಲಿ ಅದನ್ನು ಸರಿಯಾಗಿ ಎದ್ದಲಾಗಿ ಎಲ್ಲ ಶತ್ರುಗಳು ಬಹು ಸುಲಭವಾಗಿ ನಿಮ್ಮ ವಶದಲ್ಲಿ ಬರುವದಲ್ಲದೇ ನೀವು ಹೇಳಿದಂತೆ ಕೇಳತೊಡಗುವದೆಂಬಲ್ಲಿ ಸಂದೇಹವಿಲ್ಲ.

## ಮತ್ತೊಂದು ಯಂತ್ರ

| | | | |
|---|---|---|---|
| ಭಂ | ಭಂ | ಭಂ | ಭಂ |
| ಭಂ | ಭಂ | ಭಂ | ಭಂ |
| ಭಂ | ಭಂ | ಭಂ | ಭಂ |
| ಭಂ | ಭಂ | ಭಂ | ಭಂ |

ಈ ಯಂತ್ರವನ್ನು ಬಿಳಿಕಾಗದದ ಮೇಲೆ ಕಾಗೆ ಎದೆಯ ರಕ್ತವನ್ನು ಮಸಿ ಮಾಡಿಕೊಂಡು ಮತ್ತು ಸಹ ಗಿಡದ ಕಟ್ಟಿಗೆಯ ಲೆಕ್ಕಣಿಕೆಯಿಂದ ಬರೆಯಬೇಕು. ಅಲ್ಲದೇ ಎಂಟು ಲೋಹಗಳ ತಗಡುಗಳನ್ನು ಮಾಡಿ ಶತ್ರುವಿನ ಹೆಸರನ್ನು ಬರೆದು ದಕ್ಷಿಣ ದಿಕ್ಕಿನಲ್ಲಿರುವ ಕೆರೆಯಲ್ಲಿ ಒಗೆದು ಬರಬೇಕು. ಇದರಿಂದ ನಿಮ್ಮ ಶತ್ರು ನಿಮ್ಮ ವಶದಲ್ಲಿ ಬಂದು ನಿಮಗೆ ಅನುಕೂಲವಾಗಿ ವರ್ತಿಸ ತೊಡಗುವನೆಂಬುದರಲ್ಲಿ ಸಂದೇಹವೇ ಇಲ್ಲ.

## ಇನ್ನೊಂದು ಯಂತ್ರ

| | | | |
|---|---|---|---|
| ೭ | ೬ | ೯ | ೯೨ |
| ೬ | ೭ | ೧೭ | ೭೬ |
| ೯೫ | ೬೮ | ೮ | ೯ |
| ೬ | ೩ | ೯೩ | ೭೫ |

ಈ ಯಂತ್ರವನ್ನು ನಗಾಡೆಯ ಮೇಲೆ ಬರೆದು ಅದನ್ನು ಚೆನ್ನಾಗಿ ಬಾರಿಸಿದಲ್ಲಿ ಶತ್ರುವು ವಶವರ್ತಿ ಯಾಗುವದರಲ್ಲಿ ಸಂದೇಹವಿಲ್ಲ.

ಈ ಯಂತ್ರವನ್ನು ಕಾಗದದ ಮೇಲೆ ವೇಗದಿಂದ ಬರೆಯಬೇಕು ಶತ್ರುವಿನ ಮನೆಯ ಮುಂದೆ ಹೂಳಿಡಬೇಕು ಏಳು ದಿನ ಅದಕ್ಕೆ ನೀರು ಹಾಕಬೇಕು. ಆಗ ಶತ್ರು ನೀವು ಹೇಳಿದಂತೆ ಕೇಳತೊಡಗುವನು ಯಾವದೇ ಕಾರಣದಿಂದ ಮನೋರಥ ಸಿದ್ಧವಾಗದಿದ್ದರೆ ಈ ಕಾಗದವನ್ನು ತಂದು ಸುಟ್ಟು ಹಾಕಬೇಕು.

## ಶತ್ರು ಏಕೀಕರಣದ ಇನ್ನೊಂದು ಯಂತ್ರ

| | | | |
|---|---|---|---|
| ೩೩ | ೨೮ | ೯ | ೧ |
| ೨೭ | ೩೪ | ೨ | ೮ |
| ೪ | ೬ | ೧೪ | ೨೩ |
| ೭ | ೩ | ೩೧ | ೩೦ |

ಕೆಂಪು ಮಸಿಯಿಂದ ಈ ಯಂತ್ರವನ್ನು ದುಂಬಿಯ ಮೇಲೆ ಬರೆಯಬೇಕು. ಅದರ ಧ್ವನಿಯನ್ನು ಕೇಳಿದ ಕೂಡಲೇ ನಿಮ್ಮ ಶತ್ರುವು ವೈರವನ್ನು ಸಂಪೂರ್ಣವಾಗಿ ತೊರೆದು ನಿಮ್ಮ ವಶವರ್ತಿಯಾಗಿ ನಿಮಗೆ ಅನುಕೂಲವಾಗಿ ವರ್ತಿಸುವನು. ಇದಕ್ಕೆ ಸಂಶಯ ಪಡುವ ಕಾರಣವೇ ಇಲ್ಲ.

## ಆಕಳ ಹಾಲು ಹೆಚ್ಚಿಸುವ ಯಂತ್ರ

| | | | |
|---|---|---|---|
| ೯೩ | ೬೩ | ೧೮ | ೧೬ |
| ೬೪ | ೪೩ | ೩೪ | ೪೬ |
| ೭೫ | ೧೧ | ೨೧ | ೯೧ |
| ೪೪ | ೫೨ | ೫೯ | ೫೭ |

ಈ ಯಂತ್ರವನ್ನು ಗೋರೋಚನದಿಂದ ಬರೆದು ಆಕಳ ಕೊರಳಲ್ಲೂ ಕಟ್ಟಬೇಕು. ಅಂದರೆ ಆಕಳ ಹಾಲು ಹೆಚ್ಚುವದರಲ್ಲಿ ಸಂದೇಹವಿಲ್ಲ.

ಇದಲ್ಲದೇ ಈ ಯಂತ್ರವನ್ನು ಕಾಗದದ ಮೇಲೆ ಇದ್ದಲಿಯಿಂದ ಬರೆದು ಅದನ್ನು ನೀಲಿ ವಸ್ತ್ರದಲ್ಲಿ ಕಟ್ಟಿ ಆಕಳ ಕೊರಳಲಿ ಕಟ್ಟಿದ್ದಾದಲ್ಲಿ ಆಕಳ ಹಾಲು ಅವಶ್ಯವಾಗಿ ಹೆಚ್ಚುವದು.

## ಊಟ ಹೆಚ್ಚು ಮಾಡುವ ಯಂತ್ರ

| | | | |
|---|---|---|---|
| ೩ | ೯ | ೧ | ೧೭ |
| ೧೦ | ೧೩ | ೬ | ೪೩ |
| ೪೫ | ೪೧ | ೮೧ | ೧೩ |
| ೮ | ೩೫ | ೫೭ | ೭೫ |

ಯಂತ್ರವನ್ನು ಭೋ ಜ ಪ ತ್ರ ದ ಮೇಲೆ ಕ ರ ಕೋ ಟೆ ಯ ರ ಕ್ತ ದಿಂ ದ ಬರೆದು ಕಟ್ಟಿಕೊಂಡಲ್ಲಿ ಹೆಚ್ಚು ರೊಟ್ಟಿ ಗಳನ್ನು ನೀವು ಅತಿ ಸುಲಭವಾಗಿ ತಿನ್ನು ವಿರಿ.

ಇದಲ್ಲದೇ ಭೋಜಪತ್ರದ ಮೇಲೆ ಚಂದನದಿಂದ ಈ ಯಂತ್ರವನ್ನು ಬರೆದು ಊಟ ಮಾಡುವ ಸಮಯದಲ್ಲಿ ತಾಟಿನ ಬುಡದಲ್ಲಿಟ್ಟುಕೊಂಡ ರೆ ಸು ಖ ವಾ ಗಿ ಹೆಚ್ಚು ಊಟವನ್ನು ಮಾಡುವಿರೆಂಬುದರಲ್ಲಿ ಸಂದೇಹವಿಲ್ಲ.

ಪಶು ಪಕ್ಷಿ ಮೃಗಾದಿಗಳಲ್ಲದೇ ಮನುಷ್ಯರನ್ನು ಸಹ ನೀವು ಇಚ್ಛಿಸಿದಲ್ಲಿ ನಿಮ್ಮ ಬಳಿಗೆ ಬರುವಂತೆ ಮಾಡಿಕೊಳ್ಳುವಲ್ಲಿ ಈ ಆಕರ್ಷಣ ಸಾಧನೆಯು ತುಂಬಾ ಉಪಯುಕ್ತವಾಗಿರುವದು. ನೀವು ಇಚ್ಛಿಸಿದ ಪ್ರಾಣಿ — ವ್ಯಕ್ತಿ ಸಮೀಪದಲ್ಲಿಯೇ ಇರಲಿ, ಅತಿ ದೂರದಲ್ಲಿಯೇ ಇರಲಿ, ಪರದೇಶದಲ್ಲಿಯೇ ಇರಲಿ ಅವರನ್ನು ನಿಮ್ಮ ಕಡೆಗೆ ಈ ಸಾಧನೆಯಿಂದ ಅತಿ ಸುಲಭವಾಗಿ ಬರ ಮಾಡಿಕೊಳ್ಳಬಹುದಾಗಿದೆ. ಅದಕ್ಕಾಗಿ ಆಕರ್ಷಣ ಕರ್ಮದ ಪ್ರಯೋಜನ ವನ್ನು ಪಡೆಯುವಾಗ ತುಂಬಾ ಜಾಗರೂಕತೆಯನ್ನು ವಹಿಸುವದು ಅತ್ಯಂತ ಅವಶ್ಯವಿರುವದು. ಈ ಸಾಧನೆಯನ್ನು ಯಾವದೇ ರೀತಿಯಲ್ಲಿ ದುರುಪ ಯೋಗಪಡಿಸಿಕೊಳ್ಳಬಾರದು, ಅದರಿಂದ ಹಾನಿಯಾಗುವ ಸಂಭವವಿರುವ ದೆಂಬುದನ್ನು ಸಾಧಕರು ಲಕ್ಷದಲ್ಲಿಟ್ಟುಕೊಳ್ಳಬೇಕು.

# ಆಕರ್ಷಣ ಸಾಧನೆಯು

ಮಂತ್ರಗಳು

ಆಕರ್ಷಣ ಮಂತ್ರ:

ಓಂ ನಮೋ ಆದಿ ಪುರುಷಾಯ — ಸ್ಯ
ಆಕರ್ಷಣಂ ಕುರು ಕುರು ಸ್ವಾಹಾ

ಇದು ಆಕರ್ಷಣ ಸಾಧನೆಯಲ್ಲಿ ಅತ್ಯಂತ ಮುಖ್ಯವಾದ ಬೀಜಮಂತ್ರವಾಗಿರುವದು. ಒಂದು ಲಕ್ಷಸಲ ಈ ಮಂತ್ರವನ್ನು ವಿಧಿಪೂರ್ವಕವಾಗಿ ಜಪಿಸಿದಲ್ಲಿ ಈ ಮಂತ್ರದ ಸಿದ್ಧಿಯು ಲಭಿಸುವದು. ಮುಂದೆ ಇದನ್ನು ಪ್ರಯೋಗದಲ್ಲಿ ತರುವ ಸಂದರ್ಭದಲ್ಲಿ ೧೦೮ ಸಲ ಅಭಿಮಂತ್ರಿಸಬೇಕು. ಆಗ ಪ್ರಯೋಗ ಸಿದ್ಧಿಯು ಲಭ್ಯವಾಗುವದು. ನಂತರ ಯಾರ ಮೇಲೆ ಪ್ರಯೋಗ ಮಾಡಬೇಕಾಗಿದೆಯೋ ಅವರ ಹೆಸರನ್ನು ಉಚ್ಚರಿಸಬೇಕು ಆಗ ಕಾರ್ಯ ಸಿದ್ಧಿಯಾಗುವದು.

### ಇನ್ನೊಂದು ಆಕರ್ಷಣ ಮಂತ್ರ

ಓಂ ಯಂ ಯಂ ಲಂ ಲಂ ಲಂ ಲಂ ಕ್ರಾಂ ಕ್ರಾಂ ಕ್ರೈ ಠಃ ಠಃ

ರವಿವಾರ ದಿನದಂದು ಪುಷ್ಯನಕ್ಷತ್ರವಿರುವ ಕಾಲದಲ್ಲಿ ಚಿಗರಿಯನ್ನು ಕೊಂದು ತರಬೇಕು. ಸೋಮವಾರ ದಿನ ರಾತ್ರಿ ಕಾಲದಲ್ಲಿ ಅದರಮಾಂಸ ಮತ್ತು ಕರಿಎಳ್ಳುಗಳ ಹವನವನ್ನು ಮಾಡಬೇಕು. ನಂತರ ನೀವು ಯಾರನ್ನು ಆಕರ್ಷಿಸಬೇಕಾಗಿದೆಯೋ ಅವರನ್ನು ಮನಸ್ಸಿನಲ್ಲಿ ನೆನಿಸಿಕೊಂಡರೆ ಶೀಘ್ರದಲ್ಲಿಯೇ ಅವರು ನಿಮ್ಮ ಬಳಿಗೆ ಬರುವರೆಂಬಲ್ಲಿ ಏನೂ ಸಂದೇಹವಿಲ್ಲ.

### ದೇವತಾ ಆಕರ್ಷಣ ಮಂತ್ರ

ಓಂ ಹ್ರೀಂ ಶ್ರೀಂ ಧನಂ ಧನಂ ಕುರು ಸ್ವಾಹಾ

ಅಂಜೂರಿವೃಕ್ಷದ ಕೆಳಗೆ ಚಿಗರಿ ಚರ್ಮದ ಮೇಲೆ ಪದ್ಮಾಸನವನ್ನು ಹಾಕಿಕೊಂಡು ಕೂಡಬೇಕು ಮತ್ತು ಈ ಮಂತ್ರವನ್ನು ಒಂದೂಕಾಲ ಲಕ್ಷ ಸಲ ಜಪಿಸಬೇಕು. ಆಗ ಈ ಮಂತ್ರದ ಸಿದ್ಧಿಯು ನಿಮಗೆ ದೊರೆಯುವದು ಮುಂದೆ ಸರ್ವದೇವತೆಗಳೂ ನಿಮಗೆ ಪ್ರತ್ಯಕ್ಷವಾಗಿ ನಿಮ್ಮ ಇಚ್ಛೆಯನ್ನು ಪೂರ್ತಿಗೊಳಿಸುವರೆಂಬಲ್ಲಿ ಯಾವ ಸಂದೇಹವೂ ಇಲ್ಲ.

## ಪುರುಷನನ್ನು ಆಕರ್ಷಿಸುವ ಮಂತ್ರ

ಓಂ ನಮೊ ಕಾಲ ಸಂಹಾರಾಯ ಹ್ರಿಂ ಹ್ರೂಂ ಫಟ್ —
ಆಕರ್ಷಣಂ ಕುರು ಕುರು ಸ್ವಾಹಾ

ನೀವು ಯಾರನ್ನು ಆಕರ್ಷಿಸಬೇಕಾಗಿರುವದೋ ಅವರ ಹೆಸರನ್ನು ತೆಗೆದುಕೊಂಡು ಈ ಮಂತ್ರವನ್ನು ೧೦೮ ಸಲ ಜಪಿಸಬೇಕು. ಆಗ ನೀವು ಹೆಸರು ತೆಗೆದುಕೊಂಡ ಪುರುಷನು ನಿಶ್ಚಿತವಾಗಿ ಆಕರ್ಷಿತವಾಗಿ ಬರುವನೆಂಬಲ್ಲಿ ಯಾವ ಸಂದೇಹವೂ ಇಲ್ಲ

## ವಿದ್ಯಾ ಆಕರ್ಷಣ ಮಂತ್ರ

ಓಂ ಗಂ ಗಣಪತಯೆ ಸ್ವಾಹಾ

ಈ ಮಂತ್ರವನ್ನು ವಿಧಿಪೂರ್ವಕವಾಗಿ ಒಂದು ಲಕ್ಷಸಲ ಜಪ ಮಾಡಬೇಕು. ಅದರಿಂದ ಮಂತ್ರಸಿದ್ಧಿಯಾಗಿ ನಿಮಗೆ ವಿದ್ಯೆಯು ಲಭಿಸುವದೆಂಬುದು ಸುನಿಶ್ಚಿತವೆಂದು ತಿಳಿಯಿರಿ.

## ವಿದೇಶಕ್ಕೆ ಹೋಗಿರುವವನನ್ನು ತಿರುಗಿ ಬರುವಂತೆ ಆಕರ್ಷಿಸುವ ಮಂತ್ರ

ಓಂ ಗ್ಲಾಂ ಗ್ಲಿಂ ಗ್ಲೋಂ ಓಂ ಶ್ರೀ ಹ್ರಿಂ ಹಃ ಹಃ

ಅಂಜೂರಿ ಗಿಡದ ಕೆಳಗೆ ಚಿಗರಿ ಚರ್ಮದ ಮೇಲೆ ಕುಳಿತುಕೊಳ್ಳಬೇಕು ರುದ್ರವಂತಿ ಮತ್ತು ತೆಂಗಿನ ಖೀರನ್ನು ಸಿದ್ಧಪಡಿಸಬೇಕು. ಈ ಮಂತ್ರವನ್ನು

೧೦೮ ಸಲ ಅಭಿಮಂತ್ರಿಸಿ ಅದನ್ನು ಆಹುತಿ ಕೊಡಬೇಕು. ಆಗ ವಿದೇಶಕ್ಕೆ ಹೋಗಿರುವಂತಹ ವ್ಯಕ್ತಿಯು ಇತ್ತ ಕಡೆಗೆ ಆಕರ್ಷಿತನಾಗಿ ತಿರುಗಿ ಬರುವ ನೆಂಬುದು ನಿಶ್ಚಿತವಾದುದೆಂದು ತಿಳಿಯಬೇಕು.

## ಸರ್ವಾಕರ್ಷಣ ಮಂತ್ರ

ಓಂ ಹ್ರೀಂ ಸ್ವಾಹಾ

ಮೂವತ್ತೊಂದು ದಿನಗಳ ವರೆಗೆ ಈ ಮಂತ್ರವನ್ನು ಮೂರು ಲಕ್ಷಸಲ ಜಪಿಸಬೇಕು. ತದನಂತರ ಭೋಜಪತ್ರದ ಮೇಲೆ ಕೇಶರದಿಂದ ಈ ಮಂತ್ರ ವನ್ನು ಬರೆದು ಟೊಪ್ಪಿಗೆ ಇಲ್ಲವೇ ರುಮಾಲಿನಲ್ಲಿ ಇಟ್ಟುಕೊಳ್ಳಬೇಕು ಆಗ ನಿಮ್ಮ ಕಣ್ಣಾಪಿನಲ್ಲಿ ಬಂದವರೆಲ್ಲ ನಿಮ್ಮ ಕಡೆಗೆ ಬಹು ಸುಲಭ ರೀತಿಯಲ್ಲಿ ಆಕರ್ಷಿತರಾಗಿ ಬರುವರೆಂಬುದು ಅತಿ ಖಾತ್ರಿಯಾದುದೆಂದು ತಿಳಿದು ಕೊಳ್ಳಬೇಕು.

## ಸ್ತ್ರೀ ಆಕರ್ಷಣ ಮಂತ್ರ

**ಓಂ ಕಾಮಿನಿ ಆಕರ್ಷಯ.**

ಈ ಮಂತ್ರವನ್ನು ಅರ್ಧರಾತ್ರಿಯ ಹೊತ್ತಿನಲ್ಲಿ ಯಾವದಾದರೊಂದು ಬಯಲಿನಲ್ಲಿ ಒಬ್ಬನೇ ಕುಳಿತು ಜಪಿಸುತ್ತ ಹೋಗಬೇಕು. ಹದಿಮೂರು ಸಾವಿರ ಸಲ ಜಪಿಸಿದ ನಂತರ ಮಂತ್ರಸಿದ್ಧಿಯು ಒದಗಿ ಬರುವದು. ನೀವು ಯಾವ ಸ್ತ್ರೀಯನ್ನು ಆಕರ್ಷಿಸಬೇಕೆಂಬ ಬಯಕೆಯಿಂದ ಈ ಮಂತ್ರವನ್ನು ಜಪಿಸುತ್ತಿರುವಿರೋ ಆ ಸ್ತ್ರೀಯು ಒಂದು ಪ್ರಹರ ಮಾತ್ರದಲ್ಲಿ ಆಕರ್ಷಿತ ಳಾಗಿ ನಿಮ್ಮ ಕಡೆಗೆ ಬರುವಳೆಂಬುದರಲ್ಲಿ ಯಾವ ರೀತಿಯ ಸಂದೇಹವಿಲ್ಲ.

## ತಂತ್ರಗಳು

## ಸರ್ವಾಕರ್ಷಣ ತಂತ್ರ

ಆಶ್ಲೇಷಾ ನಕ್ಷತ್ರದ ಸಮಯದಲ್ಲಿ ಅರ್ಜುನ ಗಿಡದ ಕಟ್ಟಿಗೆಯನ್ನು ಸಾವಧಾನದಿಂದ ತರಬೇಕು. ಅದನ್ನು ಆಡಿನ ಹಾಲಿನಲ್ಲಿ ತೇದು ಗಂಧ

ವನ್ನು ಸಿದ್ಧಗಡಿಸಬೇಕು. ನಂತರ ನೀವು ಯಾವ ಸ್ತ್ರೀ, ಪುರುಷ, ಪಶು, ಪಕ್ಷಿಗಳನ್ನು ಆಕರ್ಷಿಸಬೇಕೆಂದು ಮಾಡಿಕೊಂಡಿರುವರೋ ಅವುಗಳಿಗೆ ಈ ಗಂಧವನ್ನು ಅವರಿಗೆ ತಿಳಿಯದಂತೆ ಲೇಪಿಸಿದರೆ ಅವು ಇಲ್ಲವೇ ಅವರು ತಮ್ಮ ಷ್ಟಕ್ಕೆ ತಾವೇ ನಿಮ್ಮತ್ರ ಆಕರ್ಷಿತರಾಗಿ ನಿಮ್ಮ ಬಳಿಗೆ ಬರುವರೆಂಬುದು ಅತ್ಯಂತ ಖಾತ್ರಿಯೆಂದು ತಿಳಿಯಬೇಕು.

## ಮತ್ತೊಂದು ತಂತ್ರ

ಆಕರ್ಷಣ ಮಂತ್ರವನ್ನು ಮೊದಲು ೧೦೮ ಸಲ ಜಪಿಸಬೇಕು. ತದ ನಂತರ ಕಿರಿಬೆರಳಿನ ರಕ್ತದಿಂದ ಕಟ್ಟಿಗೆಯನ್ನು ಲೆಕ್ಕಣಿಯನ್ನಾಗಿ ಮಾಡಿ ಕೊಂಡು ಭೋಜಪತ್ರದ ಮೇಲೆ ಯಾರನ್ನು ಆಕರ್ಷಿಸಬೇಕಾಗಿದೆಯೋ ಅವರ ಹೆಸರನ್ನು ಬರೆಯಬೇಕು ಹೆಸರಿನ ಸುತ್ತಲೂ ನಾಲ್ಕೂ ಬದಿಗೆ ಆಕರ್ಷಣ ಮಂತ್ರವನ್ನು ಬರೆಯಬೇಕು. ನಂತರ ಅದನ್ನು ಜೇನುತುಪ್ಪ ದಲ್ಲಿ ಅದ್ದಬೇಕು. ಆಗ ನೀವು ಯಾರ ಹೆಸರನ್ನು ಬರೆದಿರುವಿರೋ ಅವರು ಅವಶ್ಯವಾಗಿ ಆಕರ್ಷಿತರಾಗಿ ನಿಮ್ಮ ಬಳಿಗೆ ಬರುವರು. ಇದರಲ್ಲಿ ಯಾವ ರೀತಿಯಿಂದಲೂ ಸಂದೇಹವನ್ನು ಪಡಬೇಕಾಗಿಲ್ಲ

## ಸ್ತ್ರೀ ಆಕರ್ಷಣ ತಂತ್ರ

ಪುಷ್ಯನಕ್ಷತ್ರವು ಆದಿತ್ಯವಾರವೇ ಇರುವಂತಹ ದಿನವನ್ನು ಸಾಧಿಸಿ ಕೊಂಡು ಬ್ರಹ್ಮದಂಡಿಯನ್ನು ತೆಗೆದುಕೊಂಡು ಬರಬೇಕು. ಅದರ ಚೂರ್ಣ ವನ್ನು ಸಿದ್ಧಪಡಿಸಬೇಕು. ಈ ಚೂರ್ಣವನ್ನು ನೀವು ಯಾವ ಸ್ತ್ರೀಯನ್ನು ಆಕರ್ಷಿಸಬೇಕೆಂದು ಬಯಸಿರುವಿರೋ ಆ ಸ್ತ್ರೀಯ ತಲೆಯ ಮೇಲೆ ಹಾಕ ಬೇಕು. ಅವಳು ಅವಶ್ಯವಾಗಿ ನಿಮ್ಮ ಕಡೆಗೆ ಆಕರ್ಷಿತಳಾಗಿ ಬರುವಳು. ಇದರಲ್ಲಿ ಯಾವ ರೀತಿಯಿಂದಲೂ ಸಂಶಯವನ್ನು ತೆಗೆದುಕೊಳ್ಳಬೇಕಾಗಿಲ್ಲ.

## ಮತ್ತೊಂದು ತಂತ್ರ

ಬಲಗೈಯ ಕಿರುಬೆರಳಿನ ರಕ್ತದಿಂದ ಎಡಗೈಯ ಅಂಗೈ ಮೇಲೆ ಒಂದು ತ್ರಿಕೋನವನ್ನು ಬರೆಯಬೇಕು. ಈ ತ್ರಿಕೋನದಲ್ಲಿ ಮೂರು ರೇಖೆಗಳನ್ನು

ಎಳೆದು ಮೂರು ಭಾಗಗಳನ್ನು ಮಾಡಬೇಕು. ಮೊದಲನೇ ಭಾಗದಲ್ಲಿ ಓಂ ಹ್ರೀಂ ಕ್ಲೀಂ ಎಂದು ಬರೆಯಬೇಕು. ಎರಡನೇ ಭಾಗದಲ್ಲಿ ಶ್ರೀ ಹ್ರಾಂ ಸ್ವಾಹಾ ಎಂದು ಬರೆಯಬೇಕು. ಮೂರನೆಯ ಭಾಗದಲ್ಲಿ ಯಾರನ್ನು ಆಕರ್ಷಿಸಬೇಕಾಗಿದೆಯೋ ಆ ಸ್ತ್ರೀಯ ಹೆಸರನ್ನು ಬರೆಯಬೇಕು. ನಂತರ ಅದನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಬೇಕು. ಇದರಿಂದ ನೀವು ಆಕರ್ಷಿಸಕೊಳ್ಳಬೇಕೆಂದಿರುವ ಸ್ತ್ರೀಯು ಒಂದು ಕ್ಷಣದಲ್ಲಿ ನಿಮ್ಮ ಕಡೆಗೆ ಆಕರ್ಷಿತಳಾಗಿ ಬರುವಳು ಈ ತಂತ್ರವು ಅತ್ಯಂತ ಮಹತ್ವದ್ದಾಗಿರುವದರಿಂದ ಅದು ಫಲದಾಯಕವಾಗುವದರಲ್ಲಿ ಯಾವ ತರಹದ ಸಂದೇಹವೂ ಕಾರಣವಿರುವದಿಲ್ಲ

## ಇನ್ನೊಂದು ತಂತ್ರ

ಯಾವ ಸ್ತ್ರೀಯನ್ನು ನೀವು ಆಕರ್ಷಿಸಿಕೊಳ್ಳಬಯಸುವಿರೋ ಅವಳ ಹೆಸರನ್ನು ಭೋಜಪತ್ರದ ಮೇಲೆ ಕಿರುಬೆರಳಿನ ರಕ್ತದಿಂದ ಬರೆಯಬೇಕು. ಅದನ್ನು ಆಹುತಿ ಹಾಕಬೇಕು. ಅಂದರೆ ಎಷ್ಟೋ ದೂರದಲ್ಲಿದ್ದರೂ ಸಹ ಆ ಸ್ತ್ರೀಯು ನಿಮ್ಮ ಬಳಿಗೆ ಆಕರ್ಷಿತಳಾಗಿ ಬರುವಳು.

## ಗೆಳೆಯನನ್ನು ಆಕರ್ಷಿಸುವ ತಂತ್ರ

ಗೋಪಿಚಂದನ ಮತ್ತು ಕೇಶಗಳನ್ನು ಕೂಡಿಸಿ ಭೋಜಪತ್ರದ ಮೇಲೆ ಆಕರ್ಷಣ ತಂತ್ರವನ್ನು ಬರೆಯಬೇಕು. ಹತ್ತಿಕಟ್ಟಿಗೆಯ ಬೆಂಕಿಯಲ್ಲಿ ಅದನ್ನು ಒಣಗಿಸಬೇಕು. ಆಗ ನಿಮ್ಮ ಮಿತ್ರನು ಎಷ್ಟೇ ದೂರ ಇರಲಿ, ಎಲ್ಲಿಯೇ ಇರಲಿ ನಿಮ್ಮ ಬಳಿಗೆ ಆಕರ್ಷಿತನಾಗಿ ಬರುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## ಆಕರ್ಷಣ ಯಂತ್ರ

| | | |
|---|---|---|
| ಓಂ | ಹ್ರಿಂ | ಕ್ಲೀಂ |
| ಶ್ರೀ | ಭ್ರಿಂ | ಭ್ರಿಂ |
| ಗ್ರಿಂ | ಘ್ರಿಂ | ಕ್ರಿಂ |
| ರಾಮ | ಹ್ರಿಂ | ರಾಮ |

ಗೋಪಿಚಂದನ ಮತ್ತು ಕೇಶರಗಳ ಮಿಶ್ರಣದಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ರವಿವಾರ ದಿನದಂದು ಚತುರ್ದಶಿಯು ಬರುವ ಸಮಯವನ್ನು ಸಾಧಿಸಿಕೊಂಡು ಯಾರನ್ನು ಆಕರ್ಷಿಸಬೇಕಾಗಿದೆಯೋ ಅವರ ಹೆಸರನ್ನು ಯಂತ್ರದ ಮೇಲೆ ಬರೆಯಬೇಕು. ಅದನ್ನು ಒಂದು ಗಡಿಗೆಯಲ್ಲಿ ಹಾಕಿ ಇಡಬೇಕು. ಆಗ ನೀವು ಯಾರ ಹೆಸರನ್ನು ಬರೆದಿರುವಿರೋ ಆ ವ್ಯಕ್ತಿಯು ಅತ್ಯಂತ ಸರಳವಾಗಿ ಮತ್ತು ಸುಲಭ ರೀತಿಯಲ್ಲಿ ಆಕರ್ಷಿತವಾಗಿ ನಿಮ್ಮ ಬಳಿಗೆ ಬರುವನೆಂಬುದು ನಿಶ್ಚಿತವೆಂದು ತಿಳಿಯಬೇಕು.

## ಸರ್ವ ಆಕರ್ಷಣ ಯಂತ್ರ

| | | | |
|---|---|---|---|
| ಜೀಂ | ಜೀಂ | ಜೀಂ | ಜೀಂ |
| | | | |
| | ಜೀಂ | ಜೀಂ | |

ಬಿಳಿಯ ವಸ್ತ್ರದ ಮೇಲೆ ತುಳಸಿ ರಸದಿಂದ ಈ ಯಂತ್ರವನ್ನು ಬರೆಯಬೇಕು. ನೀವು ಯಾರನ್ನು ಆಕರ್ಷಿಸಬೇಕಾಗಿದೆಯೋ ಅವರ ಹೆಸರನ್ನು ತೆಗೆದುಕೊಂಡು ಈ ಯಂತ್ರವನ್ನು ಪೂಜಿಸಬೇಕು. ದಿನನಿತ್ಯವೂ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಆಗ ನಿಮ್ಮ ಕಾರ್ಯವು ಸಂಪೂರ್ಣವಾಗಿ ಸಿದ್ಧಿ ಹೊಂದುದೆಂಬುವದರಲ್ಲಿ ಯಾವ ಸಂದೇಹವೂ ಇಲ್ಲ.

## ಇನ್ನೊಂದು ಯಂತ್ರ

| | | | |
|---|---|---|---|
| ೮ | ೧೧ | ೭ | ೮ |
| ೭ | ೩ | ೧೨ | ೧೧ |
| ೧೪ | ೯ | ೨ | ೧ |
| ೪ | ೬ | ೧೦ | ೧೩ |

ತಾಮ್ರದ ಪಾತ್ರೆಯ ಮೇಲೆ ಬಿಳಿ ಚಂದನವನ್ನು ತೆಗೆದುಕೊಂಡು ಬಿದಿರಿನ ಲೆಕ್ಕಣಿಕೆ ಮಾಡಿಕೊಂಡು ಈ ಯಂತ್ರವನ್ನು ಬರೆಯಬೇಕು ಅದನ್ನು ವಿಧ್ಯುಕ್ತವಾಗಿಪೂಜಿಸಿ ಆಕರ್ಷಣಮಂತ್ರವನ್ನು ಪಠಿಸಿ ಯಂತ್ರವನ್ನು ಅಭಿಮಂತ್ರಿಸಬೇಕು. ಆಗ ನೀವು ಯಾರನ್ನು ಆಕರ್ಷಿಸಬೇಕೆಂದು ಇಚ್ಛಿಸುವಿರೋ ಅವರು ಬಹು ಸುಲಭವಾಗಿ ಸರಳ ರೀತಿಯಲ್ಲಿ ಆಕರ್ಷಿತರಾಗಿ ನಿಮ್ಮ ಬಳಿಗೆ ಬರುವರು. ಇದರಲ್ಲಿ ಯಾವದೇ ತರದ ಸಂದೇಹಕ್ಕೆ ಆಸ್ಪದವಿಲ್ಲವೆಂಬುವದನ್ನು ತಿಳಿಯಿರಿ

## ಸ್ತ್ರೀ ಆಕರ್ಷಣ ಯಂತ್ರ




ರವಿವಾರ ಇಲ್ಲವೇ ಮಂಗಳವಾರ ದಿವಸ ಈ ಯಂತ್ರವನ್ನು ಬರೆಯತಕ್ಕದೆಂಬುದನ್ನು ಮೊದಲಿಗೆ ಲಕ್ಷದಲ್ಲಿಡಬೇಕಾದ ಸಂಗತಿಯಾಗಿರುವದು. ಬಲಗೈಯ ಕಿರುಬೆರಳಿನ ರಕ್ತದಿಂದ ಎಡಗೈಯ ಅಂಗೈ ಮೇಲೆ ಈ ಯಂತ್ರವನ್ನು ಬರೆಯಬೇಕು. ನೀವು ಆಕರ್ಷಿಸಬೇಕೆಂದುಕೊಂಡ ಸ್ತ್ರೀಯ ಹೆಸರನ್ನು ಯಂತ್ರದಮೇಲೆ ಬರೆಯಬೇಕೆಂಬುದನ್ನು ಮರೆಯಬಾರದು. ನಂತರ ಅದನ್ನು ವಿಧಿ ನಿಯಮಗಳಿಗನು

ಸಾರವಾಗಿ ಪೂಜಿಸಬೇಕು. ಆಕರ್ಷಣ ಮಂತ್ರವನ್ನು ಪಠಿಸಿ ಮಂತ್ರವನ್ನು ಅಭಿಮಂತ್ರಿಸಬೇಕು. ಆಗ ಆ ಸ್ತ್ರೀಯು ಎಷ್ಟೇ ದೂರ ಇರಲಿ, ಎಲ್ಲಿಯೇ ಇರಲಿ, ಎಂತಹ ಸ್ವಾಭಿಮಾನಿಯೇ ಇರಲಿ ನಿಮ್ಮ ಕಡೆಗೆ ಆಕರ್ಷಿತಳಾಗಿ ಅತಿ ಸುಲಭವಾಗಿ ತಾನಾಗಿಯೇ ಬರುವಳೆಂಬುದರಲ್ಲಿ ಯಾವದೆ ತರಹದ ಸಂದೇಹಪಡುವ ಕಾರಣವಿಲ್ಲ. ಆದರೆ ಮಂತ್ರದ ವಿಧಿ ನಿಯಮ್ಮಗಳಲ್ಲಿ ಸ್ವಲ್ಪವೂ ಲೋಪ ಮಾಡಬಾರದೆಂಬುದನ್ನು ಲಕ್ಷ್ಯದಲ್ಲಿಡಬೇಕು.

## ಕಾಮಿನಿ ಆಕರ್ಷಣ ಮಂತ್ರ




ಬಲಗೈಯ ಕಿರುಬೆರಳಿನ ರಕ್ತದಿಂದ ಎಡಗೈಯ ಅಂಗೈ ಮೇಲೆ ಈ ಮಂತ್ರವನ್ನು ಬರೆಯಬೇಕಾಗುವದು. ಮೊದಲು ಈ ಯಂತ್ರವನ್ನು ನಿರ್ದಿಷ್ಟ ಪಡಿಸಿದ ವಿಧಿ ನಿಯಮಗಳಿಂದ ಪೂಜಿಸಬೇಕು. ನಂತರ ನೀವು ಯಾವ ಸ್ತ್ರೀಯನ್ನು ಆಕರ್ಷಿಸಬೇಕೆಂದು ನಿಮ್ಮ ಮನಸ್ಸಿನಲ್ಲಿ ಮಾಡಿಕೊಂಡಿರುವಿರೋ ಆ ಸ್ತ್ರೀಯ ಹೆಸರನ್ನು ತೆಗದುಕೊಳ್ಳಬೇಕು. ಅಂದರೆ ಆ ಸ್ತ್ರೀಯು ತ್ವರಿತದಲ್ಲಿಯೇ ಸರಳವಾಗಿ ನಿಮ್ಮೆದುರು ಪ್ರತ್ಯಕ್ಷವಾಗಿ ಬಂದು ನಿಲ್ಲುವಳು. ಅದಕ್ಕಾವ ರೀತಿಯ ಸಂದೇಹವೂ ಬೇಡ. ಆದರೆ ನಿರ್ದಿಷ್ಟ ಪಡಿಸಿದ ವಿಧಿ ನಿಯಮಗಳನ್ನು ಮಾತ್ರ ಅತ್ಯವಶ್ಯಕವಾಗಿ ಪಾಲಿಸಲೇಬೇಕೆಂಬುದನ್ನು ಮರೆಯಬಾರದು.

## ದೇವರನ್ನು ಕರ್ಷಿಸುವ ಯಂತ್ರ

| | | | |
|---|---|---|---|
| ೬೫ | ೭೩ | ೩ | ೮ |
| ೭ | ೩ | ೩೬ | ೬೮ |
| ೭೧ | ೭೩ | ೯ | ೧ |
| ೪ | ೬ | ೬೮ | ೭೦ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಹತ್ತಿಕಟ್ಟಿಗೆಯಿಂದ ಹಾಗೇ ಬರೆಯಬೇಕು. ಆ ಯಂತ್ರವನ್ನು ಶಿರದಲ್ಲಿ ಧರಿಸಬೇಕು. ಆಗ ದೇವದೇವತೆಗಳು ನಿಮ್ಮ ಬಗ್ಗೆ ಪ್ರಸನ್ನರಾಗುವರು ಮತ್ತು ನಿಮ್ಮ ಇಚ್ಚಿತ ಕಾರ್ಯಗಳೇನೇ ಇದ್ದರೂ ಪೂರೈಸಿಕೊಡುವರೆಂಬುದು ನಿಶ್ಚಿತವಾದುದು.

## ಪರದೇಶಿಯನ್ನು ಆಕರ್ಷಿಸುವ ಯಂತ್ರ

| | | | | | |
|---|---|---|---|---|---|
| ಸಃ | ಸ್ಥಃ | ಸಃ | ಸಃ | ಸಃ | ಸಃ |
| ಸಃ | ಕ್ರೊಂ | ಹ್ರೊಂ | ಕ್ರೀಂ | | ಸಃ |
| | | ಹೆಸರು | | | |
| ಹ್ರೀಂ | ಕ್ರೀಂ | | ಹ್ರೀಂ | ಕ್ರೀಂ | |
| ಹ್ರೀಂ | ಕ್ರೀಂ | ಹ್ರೀಂ | ಕ್ರೀಂ | | ಹ್ರೀಂ |

ಚಂದನ ಗೋಪಿಚಂದನ ಹಾಗೂ ಕೇಶರಗಳ ಮುದ್ದೆಯನ್ನು ತಯಾರಿಸಿ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು, ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಯಂತ್ರವನ್ನು ಮಡಿಚಿ ಹಳದಿ ದಾರದಿಂದ ಅದನ್ನು ಕಟ್ಟಬೇಕು. ಮನುಷ್ಯನ ಮೈಮೇಲಿರುವ ಮಣ್ಣು ಹೊಲಸಿನಿಂದ ಒಂದು ಗೊಂಬೆಯನ್ನು ಸಿದ್ಧಪಡಿಸಬೇಕು ಈ ಗೊಂಬೆಯ ಹೃದಯದಲ್ಲಿ ಈ ಯಂತ್ರವನ್ನಿರಿಸಬೇಕು, ಈ ರೀತಿ ಮೂರು ದಿವಸ ಬಿಟ್ಟೂ ಬಿಡದೇ ಮಾಡಬೇಕು, ಈ ರೀತಿ ಒಣಗಿಸುವಾಗ ಮುಂದೆ ಬರೆದ ಮಂತ್ರವನ್ನು ಉಚ್ಚರಿಸಬೇಕು, ಆ ಮಂತ್ರಃ ಓಂ ಇಮಮ್ (ಹೆಸರು) ವೇಗೇನ ಆಕರ್ಷಯ ಮಣಿ

ಭದ್ರ ಸ್ವಾಹಾ ಎಂದಿರುವದು. ಹೀಗೆ ಮಾಡಿದಲ್ಲಿ ಪರದೇಶದಲ್ಲಿ ಬಹುದಿನಗಳ ವರೆಗೆ ಇರುತ್ತಿದ್ದ ವ್ಯಕ್ತಿ ಸಹ ಇದರಿಂದ ಆಕರ್ಷಿತ ಹೊಂದಿ ಬರುವದರಿಂದ ನಿಮ್ಮ ಕಾರ್ಯವು ಸಿದ್ಧಿಸುವದೆಂಬಲ್ಲಿ ಸಂದೇಹವಿಲ್ಲ. ವಿಧಿ ನಿಯಮಗಳನ್ನು ಮಾತ್ರ ಸರಿಯಾಗಿ ಪಾಲಿಸಲು ತಪ್ಪಬಾರದು.

## ಶತ್ರುವನ್ನು ಆಕರ್ಷಿಸುವ ಯಂತ್ರ

| | | | |
|---|---|---|---|
| ಮ್ | ತಮ್ | ತಮ್ | ತಮ್ |
| ತಮ್ | ತಮ್ | ಅಮ್ | ಅಮ್ |
| ಅಮ್ | ಅಮ್ | ತಮ್ | ತಮ್ |
| ತಮ್ | ತಮ್ | ಅಮ್ | ಅಮ್ |

ಇದರ ವಿಧಾನವು ಬಹು ಕಠಿಣವಾಗಿರುವದರಿಂದ ಬಹಳೀಜಾಗರೂಕತೆಯಿಂದ ನಡೆದುಕೊಳ್ಳಬೇಕು, ಅಮಾವಾಸ್ಯೆಯ ದಿನದಂದು ಸ್ಮಶಾನಕ್ಕೆ ಹೋಗಬೇಕು. ಅಲ್ಲಿಂದ ಚಿತಾ ಭಸ್ಮವನ್ನು ತೆಗೆದುಕೊಂಡು ಬರಬೇಕು. ನಂತರ ನೀವು ಯಾವ ಶತ್ರುವನ್ನು ಆಕರ್ಷಿಸಬೇಕೆಂದು ಬಯಸುತ್ತಿರುವಿರೋ ಅವನ ಒಂದು ವಸ್ತ್ರದ ತುಂಡನ್ನು ದೊರಕಿಸಬೇಕು, ಆ ವಸ್ತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು ನಂತರ ಆಕರ್ಷಣ ಮಂತ್ರವನ್ನು ಪಠಿಸುತ್ತ ಈ ಯಂತ್ರವನ್ನು ಅಭಿಮಂತ್ರಿಸಬೇಕು ಆಗ ಆ ನಿಮ್ಮ ಶತ್ರುವು ನಿಮ್ಮ ಕಡೆಗೆ ಆಕರ್ಷಿತನಾಗುವನಲ್ಲದೇ ನಿಮ್ಮ ಕಡೆಗೇ ಅವನ ಮನಸ್ಸು ಹರಿಯಹತ್ತುವದೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲವೆಂದು ತಿಳಿದುಕೊಳ್ಳಬೇಕು ಆದರೆ ಬಹಳೇ ಲಕ್ಷ್ಯಪೂರ್ವಕವಾಗಿ ಮಾತ್ರ ನಡೆದುಕೊಳ್ಳಬೇಕಾಗುವದೆಂಬುದನ್ನು ಮರೆಯಬಾರದು.

# ಯಕ್ಷಿಣಿ ಸಾಧನೆಯು

ಯಕ್ಷಿಣಿ ಸಾಧನೆಯು ಬಹು ಸುಲಭವಾಗಿರುವಂತೆ ಪರಿಶ್ರಮದ್ದೂ ಕೆಲಮಟ್ಟಿಗೆ ಕಠಿಣವಾದುದೂ ಆಗಿರುವದು. ಮುಖ್ಯವಾಗಿ ಕೆಲವೊಂದು ಸಿದ್ಧಿಗಳನ್ನು ಪಡೆಯುವ ಕಾಲಕ್ಕೆ ಅತ್ಯಂತ ನೀತಿಪರವಾಗಿ, ಪರಿಶುದ್ಧ ರೀತಿಯಲ್ಲಿ ಜೀವನವನ್ನು ನಡೆಸುವವರಿರಬೇಕಾಗುವದು ಅವರು ಕಾಮಾತುರರಿರಬಾರದು, ಸಂಪೂರ್ಣವಾಗಿ ಬ್ರಹ್ಮಚರ್ಯವನ್ನು ಪಾಲಿಸುವಂಥವರಾಗಿರಬೇಕು, ಶುದ್ಧ ಮನಸ್ಸಿನಿಂದ ಎಲ್ಲ ವಿಧಿ ವಿಧಾನಗಳನ್ನು ಅವರು ನಡೆಸಬೇಕು. ಯಾವದೇ ಕಾಲಕ್ಕೆ ಭಯಪಡುವಂತಹವರಾಗಿರಬಾರದು, ಭೀತಿಗೊಳಗಾದಲ್ಲಿ ಕಾರ್ಯಸಿದ್ಧಿಯಾಗುವದಿಲ್ಲವಿಷ್ಟೇ ಅಲ್ಲ ಹಾನಿಯಾಗುವ ಸಂಭವವೂ ವಿಶೇಷವಾಗಿರುವದು. ಅದಕ್ಕಾಗಿ ಯಕ್ಷಿಣಿ ಸಾಧನೆಯ ಕಾಲಕ್ಕೆ ಬಹು ತಾಳ್ಮೆಯಿಂದಲೂ. ಸಾವಧಾನದಿಂದಲೂ, ಜಾಗರೂಕತೆಯಿಂದಲೂ ನಡೆಯಿುವದು ಅತ್ಯಂತ ಅವಶ್ಯವಿರುವದೆಂಬುದನ್ನು ಮೊದಲಿಗೇ ಲಕ್ಷಿಸಬೇಕು

ಆಷಾಢಪೌರ್ಣಿಮೆಯ ದಿವಸ ಶುಕ್ರವಾರ ಇಲ್ಲವೇ ಗುರುವಾರ ಇರುವಂತೆ ನೋಡಿಕೊಂಡು ಅಂದು ಮುಂಜಾನೆ ನಸುಕಿನಲ್ಲಿ ಈ ಸಾಧನೆಯನ್ನು ಪ್ರಾರಂಭಿಸಬೇಕು ಅದರ ಹಿಂದಿನ ದಿನ ಕ್ಷೌರ ಕರ್ಮಾದಿಗಳನ್ನು ತೀರಿಸಿಕೊಂಡು ಶುದ್ಧರಾಗಿರಬೇಕು ಇಡೀ ಶ್ರಾವಣಮಾಸದಲ್ಲಿ ಈ ಸಾಧನೆಯನ್ನು ನಡೆಸಬೇಕು, ಯಾರೂ ಇಲ್ಲದ ಸ್ಥಳವೊಂದನ್ನು ಆರಿಸಿಕೊಂಡ ಬಿಲ್ವವೃಕ್ಷದ ಕೆಳಗೆ ಶಿವಲಿಂಗವನ್ನು ಸ್ಥಾಪಿಸಿ ದಿನನಿತ್ಯವೂ ಅದನ್ನು ಪೂಜಿಸಬೇಕು ರುದ್ರಪಾಠವನ್ನು ನಡೆಸಬೇಕು. 'ಓಂ ಮಹೇಶ್ವರಾಯನಮಃ, ಎಂಬ ಮಂತ್ರವನ್ನು ಐದುಸಾವಿರ ಸಲ ಜಪಿಸಬೇಕು.

ಇದರ ನಂತರ, "ತಕ್ಷರಾಜ ನಮಃ ತುಭ್ಯಂ ಶಂಕರ ಪ್ರಿಯ ಬಾಂಧವ
ಏಕಾಂ ಮೆ ವಶಗಾ ನಿತ್ಯಂ ಯಕ್ಷಿಣಿ ಕುರುತೆ ನಮಃ ।

ಈ ಮಂತ್ರವನ್ನು ಪ್ರತಿದಿನ ೧೦೮ ಸಲ ಜಪಿಸಬೇಕು. ಅನುಷ್ಠಾನವನ್ನು ಪೂರ್ಣಗೊಳಸುವವರೆಗೂ ಈ ರೀತಿ ಜಪಿಸಬೇಕು. ಬ್ರಹ್ಮಚರ್ಯ

ವೃತವನ್ನು ಪಾಲಿಸಬೇಕು. ಅಲ್ಲದೇ ಕೇವಲ ಹಾಲಿನ ಮೇಲೆಯೇ ಇರಬೇಕು, ಅಂದರೆ ಸಿದ್ಧಿಯಾಗುವದು. ಯಕ್ಷಿಣಿಯು ಪ್ರಸನ್ನಳಾಗುವಳು. ಅವಳು ನಿಮಗೆ ದರ್ಶನ ಕೊಡುವಳು, ನಿಮ್ಮ ಇಷ್ಟ ಪೂರ್ತಿಯಾಗುವದು.

## ಹನುಮಾನ ಸಿದ್ಧಿ

ಮಂಗಳವಾರ ಇಲ್ಲವೇ ಶನಿವಾರ ದಿವಸದಂದು ಅತ್ಯಂತ ಪವಿತ್ರರಾಗಿ ಮತ್ತು ಶುದ್ಧರಾಗಿ ನದಿ ದಂಡೆಯ ಮೇಲಿರುವ ನಿರ್ಜನವಾದ ಮತ್ತು ನಿರವವಾದ ಸ್ಥಳಕ್ಕೆ ಹನುಮಂತನ ಸಣ್ಣ ಮೂರ್ತಿಯೊಂದನ್ನು ತೆಗೆದುಕೊಂಡು ಹೋಗಬೇಕು. ಅಲ್ಲಿ ಆ ಮೂರ್ತಿಯನ್ನು ಪ್ರತಿಷ್ಠಾಪಿಸಿ ಹವನವನ್ನು ಮಾಡಬೇಕು. ಓಂ ರಾಮ ಭಗವತಃ ಸ್ವಾಹಾ ಎಂದು ಪ್ರತಿದಿನ ಹತ್ತು ಸಾವಿರ ಸಲ ಆಹುತಿಯನ್ನು ಕೊಡಬೇಕು, ಮೂರ್ತಿಯನ್ನು ಅರಿಷಣ, ಕುಂಕುಮ ತುಪ್ಪ ಇತ್ಯಾದಿಗಳಿಂದ ಪೂಜಿಸಬೇಕು, ಹನ್ನೊಂದು ದಿನಗಳ ವರೆಗೆ ಇದೇ ರೀತಿ ಪ್ರಯೋಗವನ್ನು ಮಾಡಬೇಕು. ಈ ರೀತಿ ಪ್ರಯೋಗವನ್ನು ಮುಗಿಸಿಕೊಂಡು ಬಂದು ನೆಲದ ಮೇಲೆಯೇ ಮಲಗಿಕೊಳ್ಳಬೇಕು. ಹನ್ನೊಂದನೇ ದಿನ ಸಾಧಕನಿಗೆ ಇದರ ಸಿದ್ಧಿಯು ನಿಶ್ಚಯವಾಗಿಯೂ ದೊರೆಯುವದು. ಆದರೆ ಅಭ್ಯಾಸಿಯು ಭಯ ಭೀತಿಯನ್ನು ಹೊಂದಿರಬಾರದು. ಹಾಗೆ ಭಯದಟ್ಟುಕೊಂಡಲ್ಲಿ ಸಿದ್ಧಿಯಾಗುವ ಬದಲು ಹಾನಿಯೇ ಹೆಚ್ಚಾಗುವದು. ಅದಕ್ಕಾಗಿ ಈ ಸಿದ್ಧಿಯನ್ನು ಪಡೆಯಲು ಸಾಧಕನು ಬಹು ಸಾವಧಾನದಿಂದ ಕಾರ್ಯ ಮಾಡಬೇಕೆಂಬುದನ್ನು ಮರೆಯಬಾರದು.

ಈ ಸಾಧನೆಯ ಮೊದಲು ಕೆಲವೊಂದು ನಿಯಮಗಳನ್ನು ಪಾಲಿಸಬೇಕಾದುದು ಅತ್ಯವಶ್ಯವಾಗಿರುವದು. ಕಾಮಿಗಳು ಈ ಸಿದ್ಧಿಯನ್ನು ಪಡೆಯುವ ಯತ್ನವನ್ನು ಅಪ್ಪಿತಪ್ಪಿ ಸಹಿತ ಮಾಡಬಾರದು. ಅವರಿಗೆ ಲಾಭದ ಬದಲು ಹಾನಿಯೇ ಆಗುವ ಸಂಭವವಿರುವದು. ಸಿದ್ಧಿಯಾಗಬೇಕೆಂದು ಬಯಸುವವರು ಬ್ರಹ್ಮಚರ್ಯ ವೃತವನ್ನು ಪಾಲಿಸುವದು ಅತ್ಯವಶ್ಯವಿರುವದು. ಅದಕ್ಕಾಗಿ ಮೊದಲು ಆಚರಣೆಯನ್ನು ಶುದ್ಧಗೊಳಿಸಿಕೊಳ್ಳುವದು ಅತ್ಯವಶ್ಯವಿದೆ. ಅಶುಭ ವಿಚಾರಗಳನ್ನು ಮನಸ್ಸಿನಿಂದ ತೆಗೆದು ಹಾಕಬೇಕದು

ಕ್ಕಾಗಿಯೇ "ತತ್ರಾ ಹಿಂಸಾಸತ್ಯಾಸ್ತೆ ಬ್ರಹ್ಮಚರ್ಯಾಪರಿಗ್ರಾಯಮಃ, ಎಂದು ಹೇಳಲಾಗಿರುವದು ಶುದ್ಧವಾಗಿರುವದು ಸದಾ ಸಂತೋಷದಿಂದಿರುವದು, ತಪಸ್ಸನ್ನು ಮಾಡುವದು, ವೇದಶಾಸ್ತ್ರಗಳನ್ನು ಓದಿಕೊಳ್ಳುವದು, ಈಶ್ವರನ ಪ್ರೇಮ ಇವು ಈ ಸಿದ್ಧಿಗೆ ಮೊದಲು ಅನುಸರಿಸಬೇಕಾದ ಕೆಲ ಮುಖ್ಯವಾದ ನಿಯಮಗಳಾಗಿರುವವು ಈ ರೀತಿ ನಿಮ್ಮ ಆಚರಣೆಯಿದ್ದರೆ ಮಾತ್ರ ಈ ಸಿದ್ಧಿಯು ಕಾರ್ಯದಲ್ಲಿ ಕೈಹಾಕಬೇಕು ಹಾಗಿಲ್ಲದೇ ಹೋದಲ್ಲಿ ಮರೆತು ಸಹ ಇತ್ತ ಮನಸ್ಸು ಹಾಕಬಾರದು. ಇದು ಬಹು ಕಠೋರ ನಿಯಮಗಳ ಪಾಲನೆಯ ಸಿದ್ಧಿಯಾಗಿರುವದೆಂಬುದು ನೆನಪಿನಲ್ಲಿಡತಕ್ಕ ಅತ್ಯಂತ ಮುಖ್ಯವಾದ ಸಂಗತಿಯಾಗಿದೆ.

## ಸುರಸುಂದರಿ ಯಕ್ಷಿಣಿ ಸಾಧನೆಯು

ಓಂ ಆಗಚ್ಛ ಆಗಚ್ಛ ಸುರಸುಂದರಿ ಮನೋಹರಿ ಸ್ವಾಹಾ

ನದಿಯ ಸಂಗಮ ಸ್ಥಾನದಲ್ಲಿ ಚಂದನದ ಮಂಟಪವನ್ನು ರಚಿಸಬೇಕು. ಅಲ್ಲಿ ಸುರಸುಂದರಿ ಯಕ್ಷಿಣಿಯ ಪೂಜೆಯನ್ನು ಮಾಡಬೇಕು ಪೂಜೆಯ ಕಾಲಕ್ಕೆ ಮೂರು ಸಾವಿರ ಸಲ ಈ ಮಂತ್ರವನ್ನು ಜಪಿಸಬೇಕು ಸುರಸುಂದರಿಗೆ ಊದಬತ್ತಿಯ ಹೊಗೆಯು ಮುಟ್ಟುವಂತೆ ದಿನಾಲು ಸಾಕಷ್ಟು ಊದಿನಕಡ್ಡಿಗಳನ್ನು ಹಚ್ಚಬೇಕು. ಇದೇ ರೀತಿ ಒಂದು ತಿಂಗಳವರೆಗೆ ಮಂತ್ರಜಪ ಹಾಗೂ ಪೂಜೆಗಳನ್ನು ನೆರವೇರಿಸಬೇಕು. ಆಗ ಸುರಸುಂದರಿ ಯಕ್ಷಿಣಿಯು ನಿಮ್ಮ ಪೂಜೆ ಜಪಗಳಿಂದ ಬಹಳಷ್ಟು ಸಂತುಷ್ಟಳಾಗಿ ನಿಮಗೆ ದರ್ಶನ ಕೊಡುವಳು ಈ ಯಕ್ಷಿಣಿಯು ಯಾವಾಗಲೂ ರಾತ್ರಿಕಾಲದಲ್ಲಿಯೇ ದರ್ಶನ ಕೊಡುವಳಾದ್ದರಿಂದ ಇಡೀ ರಾತ್ರಿ ಬಹಳ ಜಾಗರೂಕರಾಗಿ ಕುಳಿತಿರಬೇಕು. ಅವಳು ದರ್ಶನ ಕೊಟ್ಟ ಕೂಡಲೇ ಚಂದನದ ಅರ್ಘ್ಯವನ್ನು ಕೊಡಬೇಕು. ಫಲಪುಷ್ಪಗಳಿಂದ ಅವಳನ್ನು ಅರ್ಚಿಸಬೇಕು, ಅವಳ ಕೃಪಾದೃಷ್ಟಿ ನಿಮ್ಮ ಮೇಲೆ ಆಗಿದೆಯೆಂದು ಕಂಡ ಕೂಡಲೇ ವರವನ್ನು ಕೇಳಿಕೊಳ್ಳಬೇಕು. ಅವಳು ಪ್ರತಿದಿನವೂ ನಿಮಗೆ ಒಂದುನೂರು ಸುವರ್ಣ ನಾಣ್ಯಗಳನ್ನು ಕೊಡುವಳು,

## ಕನಕವತಿ ಯಕ್ಷಿಣಿ ಸಾಧನೆಯು

ಓಂ ಹ್ರೀಂ ಕನಕವತಿ ಮೈಥುನಪ್ರಿಯೆ ಸ್ವಾಹಾ

ಪ್ರತಿದಿನ ಒಂದುಸಾವಿರ ಸಲ ಈ ಮಂತ್ರವನ್ನು ಜಪಿಸಬೇಕು ಕನಕವತಿ ಯಕ್ಷಿಣಿಗೆ ಮಾಂಸ ಮದಿರೆಗಳ ಬಲಿಯನ್ನು ಕೊಡಬೇಕು, ಈ ರೀತಿ ಏಳು ದಿವಸ ಸಾಧನೆಯನ್ನು ನಡೆಸಬೇಕು. ಅವಳು ನಿಮಗೆ ಸಹಚರಿಯಾಗಿ ಪ್ರೇಯಸಿಯ ರೂಪದಲ್ಲಿ ದರ್ಶನ ಕೊಡುವಳಲ್ಲದೇ ಮನೆಯಲ್ಲಿ ಧನ ಧಾನ್ಯ ಆಭರಣಗಳು ತುಂಬಿರುವಂತೆ ಕರುಣಿಸುವಳು.

## ರತಿಪ್ರಿಯಾ ಯಕ್ಷಿಣಿಯ ಸಾಧನೆಯು

ಓಂ ಆಗಚ್ಛ ರತಿಪ್ರಿಯಾ ಸ್ವಾಹಾ

ಬಿಳಿಯದಾದ ಶುಭ್ರವಸ್ತ್ರದ ಮೇಲೆ ರತಿಪ್ರಿಯಾ ಯಕ್ಷಿಣಿಯ ಚಿತ್ರವನ್ನು ತೆಗೆಯಬೇಕು. ಅವಳ ಎರಡೂ ಕೈಗಳಲ್ಲಿ ಕಮಲಗಳು ಇರುವಂತೆ ಬರೆಯಬೇಕು. ಜಾಜಿಕಾಯಿಯಿಂದ ಅವಳನ್ನು ಪೂಜಿಸಬೇಕು, ಅಲ್ಲದೇ ಈ ಮೇಲೆ ಹೇಳಿದ ಮಂತ್ರವನ್ನು ದಿನಾಲು ಒಂದು ಸಾವಿರ ಸಲ ಜಪಿಸಬೇಕು. ಆಗ ರತಿ ಪ್ರಿಯಾ ಯಕ್ಷಿಣಿಯು ಪ್ರಸನ್ನವದನಳಾಗಿ ನಿಮ್ಮಬಳಿಗೆ ಬರುವಳು. ನೀವು ಅವಳನ್ನು ಪತ್ನಿ ಸಮಾನಳಾಗಿ ಭಾವಿಸಿ ಭೋಗವಿಲಾಸ ಪಡೆಯಬೇಕು. ಅವಳು ನಿಮಗೆ ಬಹಳಷ್ಟು ದ್ರವ್ಯಲಾಭವನ್ನು ಮಾಡಿ ಕೊಡುವಳೆಂಬಲ್ಲಿ ಸಂದೇಹವಿಲ್ಲ.

## ಲಕ್ಷ್ಮೀ ಯಕ್ಷಿಣಿ ಸಾಧನೆಯು

ಯಾವ ಸ್ಥಳದಲ್ಲಿ ಈ ಯಕ್ಷಿಣಿಯ ಸಾಧನೆಯನ್ನು ಮಾಡಬೇಕಾಗಿದೆಯೋ ಅದನ್ನು ಮೊದಲು ಸಂಪೂರ್ಣವಾಗಿ ಶುದ್ಧಗೊಳಿಸಬೇಕು, ಪವಿತ್ರವಾಗಿರಿಸಬೇಕು, ಸಾಧನವನ್ನು ಪ್ರಾರಂಭಿಸುವ ಮೊದಲು ಅಲ್ಲಿ ಧೂಪ ದೀಪಾದಿಗಳನ್ನು ಹಾಕಬೇಕು, ಪುಷ್ಪಮಾಲೆಗಳನ್ನು ಅಲ್ಲಲ್ಲಿ ಏರಿಸಬೇಕು, ಉತ್ತರ ಭಾದ್ರಪದ ನಕ್ಷತ್ರವಿರುವ ದಿನದಂದು ಅಷ್ಟಧಾತುಗಳಿಂದ ಲಕ್ಷ್ಮಿಯ ಮೂರ್ತಿಯನ್ನು ಸಿದ್ಧಪಡಿಸಿ ಪ್ರತಿಷ್ಠಾಪಿಸಬೇಕು. ಮುಂಜಾನೆಯ ಹೊತ್ತಿ

ನಲ್ಲಿ ಗಂಗಾಜಲದಿಂದ ಸ್ನಾನ ಮಾಡಿಸಿ ಕೇಶರ ಕಸ್ತೂರಿಗಳ ತಿಲಕವನ್ನು ಹಚ್ಚಬೇಕು. ಅವಳ ಚರಣಾಮೃತವನ್ನು ತೆಗೆದುಕೊಂಡು ಶುದ್ಧರೂ, ಪವಿತ್ರರೂ ಆಗಬೇಕು. ರೇಶಿಮೆಯ ವಸ್ತ್ರ ಧರಿಸಿ ಈ ಮೂರ್ತಿಯ ಚಿತ್ರವನ್ನು ಹೃದಯದಲ್ಲಿ ಧರಿಸಿಕೊಂಡು ಈ ಕೆಳಗೆ ಬರೆದಿರುವಂತಹ ಮಂತ್ರವನ್ನು ಜಪಿಸಬೇಕು. 'ಓಂ ಏಂ ಲಕ್ಷ್ಮಿ ಶ್ರೀ ಕಮಲಧಾರಿಣಿ ಕಲಹಂಸಿ ಸ್ವಾಹಾ, ಎಂದು ಮಂತ್ರ ಪಠಿಸುತ್ತ ಕೆಂಪು ಕಣಗಲ ಹೂವುಗಳಿಂದ ಹವನ ಮಾಡಬೇಕು, ಹತ್ತು ಸಾವಿರ ಆಹುತಿಗಳನ್ನು ಕೊಡಬೇಕು. ಈ ರೀತಿ ಮೂವತ್ತು ದಿನಗಳ ವರೆಗೆ ಪೂಜಿಸಿದ ನಂತರ ಲಕ್ಷ್ಮಿ ಯಕ್ಷಿಣಿಯು ಪ್ರಸನ್ನಳಾಗಿ ನಿಮ್ಮ ಕನಸ್ಸಿನಲ್ಲಿ ಕಾಣಿಸಿಕೊಂಡು ವರಪ್ರದಾನ ಮಾಡುವಳು ಆದರೆ ಪೂಜೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ಸಹ ಯಕ್ಷಿಣಿಯುನಿಮಗೆ ವರ ಕೊಡುವ ಬದಲು ನಿಮ್ಮನ್ನು ದರಿದ್ರರನ್ನಾಗಿ ಮಾಡಿ ಹೊರಟುಹೋಗುವಳೆಂಬುದನ್ನ ಯಾವ ಕಾಲಕ್ಕೂ ಮರೆಯಬಾರದು.

ಲಕ್ಷ್ಮಿ ಯಕ್ಷಿಣಿಯ ಪೂಜೆಯ ಕಾಲಕ್ಕೆ ಜಪಿಸುವ ಮಂತ್ರವು ಈ ರೀತಿಯಾಗಿರುವದು.

ಲಕ್ಷ್ಮಿಕಾಂತಮ್ ಕಮಲನಯನಂ ಸಿಂಧೂರ ಶೋಭಾವರಂ
ಭಾವೇಯ ತಿಲಕ ಲಲಾಟ ಕುಕ್ಕುಟ ಬಾಣಿವರಂ ವರದಾಯಕಂ

## ಶೋಭನ ಯಕ್ಷಿಣಿ ಸಾಧನೆಯು

ಓಂ ಅಶೋಕ ಪಲ್ಲವ ಕಾಂಕಸ್ತನೆ ಶೋಭಾ ಪ್ರಿಯೆ ಸ್ವಾಹಾ

ಕೆಂಪು ವಸ್ತ್ರವನ್ನು ಧರಿಸಬೇಕು, ಕೆಂಪು ಮಾಲೆಯನ್ನು ಹಾಕಿಕೊಳ್ಳಬೇಕು, ನಂತರ ಮೇಲಿನ ಮಂತ್ರವನ್ನು ೧೪ ದಿನಗಳ ವರೆಗೆ ಜಪಿಸಬೇಕು. ಆಗ ಶೋಭನಾ ಯಕ್ಷಿಣಿಯು ನಿಮಗೆ ಪ್ರಸನ್ನಳಾಗುವಳು ಮತ್ತು ಎಲ್ಲ ಬಗೆಯ ಸುಖ ಭೋಗಗಳು ನಿಮಗೆ ದೊರೆಯುವಂತೆ ಕರುಣಿಸುವಳು

## ಮದನ ಯಕ್ಷಿಣಿ ಸಾಧನೆಯು

ಅತ್ಯಂತ ಪವಿತ್ರರೂ, ಶುದ್ಧರೂ ಆಗಿ ರಾಜದ್ವಾರದ ಮೇಲೆ ಕುಳಿತುಕೊಂಡು "ಓಮ್ ಏಮ್ ಮದನ ವಿದಾರಿಣಿ ಅನಂಗ ಸಂಗಮ ದೇಹಿ ಕ್ರಿಮ್ ಕ್ರಿಮ್ ಸ್ವಾಹಾ, ಎಂಬ ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಬೇಕು ತದನಂತರ ಖೀರು, ಮಾಲತಿ ಹೂವು ಹಾಗೂ ತುಪ್ಪಗಳನ್ನು

ಸೇರಿಸಿ ಹವನ ಮಾಡಬೇಕು ಅಲ್ಲದೇ ಈ ಮಂತ್ರವನ್ನು ಪಠಿಸುತ್ತ ಒಂದು ಸಹಸ್ರ ಆಹುತಿಗಳನ್ನು ಕೊಡಬೇಕು ಆಗ ಮದನ ಯಕ್ಷಿಣಿಯು ನಿಮಗೆ ಪ್ರಸನ್ನಳಾಗಿ ಒಂದು ಗುಟಿಕೆಯನ್ನು ಕೊಡುವಳು. ಅದನ್ನು ನೀವು ಬಾಯಿಯಲ್ಲಿ ಇರಿಸಿಕೊಂಡ ಕೂಡಲೇ ಅದೃಶ್ಯರಾಗುವಿರಿ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲವೆಂದು ನೀವು ತಿಳಿದುಕೊಳ್ಳಬೇಕು

## ಕರ್ಣಪಿಶಾಚಿನಿ ಯಕ್ಷಿಣಿಯ ಸಾಧನೆಯು

ಓಂ ಕ್ರಿಮ್ ಸಮಾನಶಕ್ತಿ ಭಗವತಿ ಕರ್ಣಪಿಶಾಚಿನಿ
ಚಂದ್ರರೋಪತಿ ವರ ವರ ಸ್ವಾಹಾ

ಈ ಮಂತ್ರವನ್ನು ಹತ್ತುಸಾವಿರ ಸಲ ಜಪಿಸಬೇಕು. ರಾತ್ರಿಯಲ್ಲಿ ಮಲಗುವಾಗ ಒಂದು ಕೋರಫಡಿಯ ಹೂವಿನ ತುರಾಯಿಯನ್ನು ಕೈಯಲ್ಲಿ ಹಿಡಿದುಕೊಂಡು ಮಲಗಬೇಕು ಅಂದರೆ ಕರ್ಣಪಿಶಾಚಿನಿ ಯಕ್ಷಿಣಿಯು ರಾತ್ರಿಯ ಕಾಲದಲ್ಲಿ ನಿಮ್ಮ ಸ್ವಪ್ನದಲ್ಲಿ ಕಾಣಿಸಿಕೊಂಡು ಶುಭಾಶುಭ ಫಲಗಳನ್ನು ನಿಮಗೆ ತಿಳಿಸುವಳು. ಇದು ಅತ್ಯಂತ ನಿಶ್ಚಿತವೆಂದೂ ಖಾತ್ರಿಯೆಂದೂ ನೀವು ತಿಳಿದುಕೊಳ್ಳಬೇಕು. ಆದರೆ ಸಾಧನೆಯಲ್ಲಿ ಸ್ವಲ್ಪವೂ ಹುಸಿಯಾಗದಂತೆ ನೋಡಿಕೊಳ್ಳುವದು ಅವಶ್ಯವಾಗಿರುವದು

## ಮಹಾಮಾಯಾ ಸಾಧನೆಯು

ಇದರ ಮಂತ್ರವು 'ಓಂ ಹ್ರೀಂ ಹ್ರಿಂ ಕ್ಲೀಂ ಮಹಾಮಾಯಾ ಕ್ಲಿಂ ಸ್ವಾಹಾ ಎಂದಿರುವದು.

ಮನುಷ್ಯನ ಎಲುವಿನ ಮಾಲೆಯನ್ನು ಸಿದ್ಧಪಡಿಸಿ ಕೊರಳಲ್ಲಿ ಹಾಗೂ ಎರಡೂ ಕೈಗಳಿಗೆ ಕಟ್ಟಿಕೊಳ್ಳಬೇಕು ಈ ಮೇಲಿನ ಮಂತ್ರವನ್ನು ಸಂಪೂರ್ಣ ನಿರ್ಭಯತೆಯಿಂದ ಜಪಿಸಬೇಕು. ಒಂದು ಲಕ್ಷ ಹೀಗೆ ಜಪ ಮಾಡುವದು ಅವಶ್ಯವಿರುವದು, ಈ ರೀತಿಯಾಗಿ ನೀವು ಅವಳ ಸಾಧನೆಯನ್ನು ಪೂರ್ಣಗೊಳಿಸಿದ ನಂತರ ಮಹಾಮಾಯಾ ಯಕ್ಷಿಣಿಯು ಪ್ರಸನ್ನ ಹೊಂದಿ ನಿಮ

ಗೊಂದು ರಸಾಯನವನ್ನು ಕೊಡುವಳು. ನೀವು ಅದನ್ನು ಸೇವಿಸಿದಲ್ಲಿ ಎಲ್ಲ ಪ್ರಕಾರದ ರತ್ನಗಳು ನಿಮ್ಮ ವಶದಲ್ಲಿ ಬರುವವು. ಸಾಧನೆಯ ಮೊದಲು ಶುಚಿರ್ಭೂತರಾಗಿರುವದು ಅತ್ಯವಶ್ಯವಿರುವದಲ್ಲದೇ ಬಹಳಷ್ಟು ನಿರ್ಭಯರಾಗಿರಬೇಕಾಗುವದು.

## ಧನ ಯಕ್ಷಿಣಿಯ ಸಾಧನೆಯು

ಈ ಸಾಧನೆಯ ಮಂತ್ರವು ಓಂ ಏಂ ಹಿ ಧನಂ ಕುರು ಸ್ವಾಹಾ ಘಟ್ ಸ್ವಾಹಾ ಎಂದಿರುವದು.

ಏಕಾಗ್ರಚಿತ್ತದಿಂದ ಅಂಜೂರಿ ಗಿಡದ ಕೆಳಗೆ ಕುಳಿತುಕೊಂಡು ಈ ಮಂತ್ರವನ್ನು ಹತ್ತು ಸಾವಿರ ಸಲ ಜಪಿಸಬೇಕು. ಅಂದರೆ ಧನ ಯಕ್ಷಿಣಿಯು ನಿಮಗೆ ಪ್ರಸನ್ನಳಾಗಿ ಬಹಳಷ್ಟು ಸಂಪತ್ತನ್ನು ಒದಗಿಸಿ ಕೊಡುವಳು ಇದು ಸುನಿಶ್ಚಿತವು.

## ಪುತ್ರಪ್ರಾಪ್ತಿ ಯಕ್ಷಿಣಿಯ ಸಾಧನೆಯು

ಈ ಸಾಧನೆಯಲ್ಲಿ ಓಂ ಹ್ರೀಂ ಹ್ರೀಂ ಹ್ರೊಂ ಪುತ್ರ ಕುರು ಕುರು ಸ್ವಾಹಾ ಎಂಬ ಮಂತ್ರವನ್ನು ಪಠಿಸಬೇಕಾಗುವದು ಹಾಗೂ ಜಪಿಸಬೇಕಾಗುವದು.

ಮಾವಿನಮರದ ಮೇಲೆ ಕುಳಿತು ಈ ಮಂತ್ರವನ್ನು ಹತ್ತು ಸಾವಿರ ಸಲ ಜಪಿಸಿದರೆ ಪುತ್ರದಾಯಕ ಯಕ್ಷಿಣಿಯು ಪ್ರಸನ್ನಳಾಗಿ ಪುತ್ರ ಭಿಕ್ಷೆ ನೀಡುವಳು. ನಿಪುತ್ರಿಕರು ಸಹ ಈ ಯಕ್ಷಿಣಿಯನ್ನು ಪ್ರಸನ್ನೀಕರಿಸಿಕೊಂಡು ಪುತ್ರದಾನವನ್ನು ಪಡೆಯ ಬಹುದಾಗಿರುವದು

## ಚಂಡಿಕಾ ಯಕ್ಷಿಣಿ ಸಾಧನೆಯು

ಭಾದ್ರಪದ ಶುಕ್ಲಪ್ರತಿಪದೆಯಿಂದ ಈ ಸಾಧನೆಯನ್ನು ಆರಂಭಿಸಬೇಕು. ಬೆಳದಿಂಗಳ ಮೂಡಿದ ಹೊತ್ತಿಗೆ ರಾತ್ರಿ ಕಾಲದಲ್ಲಿ ಸಾಧಕನು

ಸ್ಮಶಾನಕ್ಕೆ ಹೋಗಿ ಚಿತಾಭಸ್ಮವನ್ನು ಅರ್ಧಚಂದ್ರಾಕಾರ ಮಾಡಿಕೊಂಡು ಮಂತ್ರ ಪಠಣವನ್ನು ಪ್ರಾರಂಭಿಸಬೇಕು. ಮೂವತ್ತು ದಿನಗಳ ವರೆಗೆ ಈ ರೀತಿ ಜಪವನ್ನು ಮಾಡಬೇಕು, ಸ್ವಾತಿ ನಕ್ಷತ್ರವಿರುವ ಸಮಯದಲ್ಲಿ ಈ ಜಪವನ್ನು ಮುಗಿಸಬೇಕು.

ಜಪಮಾಡುವ ಮಂತ್ರವು ಈ ರೀತಿ ಇರುತ್ತದೆ.

ಓಂ ಹ್ರೀಂ ಚಾಮುಂಡಾಯ ವಿಚೇಸ ಸ್ವಾಹಾ
ಓಂ ಚಂಡಿಕಾ ಯಕ್ಷಿಣ್ಯೈ ನಮಃ ಸ್ವಾಹಾ

ಒಂದು ಲಕ್ಷ ಸಲ ಈ ಮಂತ್ರದ ಜಪವನ್ನು ಮಾಡಬೇಕು, ಜಪಕ್ಕಾಗಿ ಸಿದ್ಧಮಾಡಿಸುವ ಮಾಲೆ ಎಲುಬಿನದಿದ್ದು ಉಣ್ಣೆಯಲ್ಲಿ ಪೋಣಿಸಿರಬೇಕು ಪ್ರತಿಯೊಂದರ ಮೇಲೆಯೂ 'ಓಂ ಶ್ರೀ, 'ಓಂ ಕ್ಷಃ, 'ಓಂ ಕ್ಷಿ, ಎಂದು ಬರೆಯಬೇಕು. ಪ್ರತಿಯೊಂದು ಜಪ ಮುಗಿದ ನಂತರ ತುಪ್ಪ ಬೆಲ್ಲಗಳ ಆಹುತಿಯನ್ನು ಕೊಡುತ್ತ ಹೋಗಬೇಕು. ಹವನದ ಕೊನೆಯಲ್ಲಿ ಹಾಲು ಮೊಸರು, ತುಪ್ಪ, ಜೇನುತುಪ್ಪ ಇವುಗಳ ಆಹುತಿಯನ್ನು ಕೊಡಬೇಕು. ನಂತರ ಮನೆಗೆ ಬಂದು ಬ್ರಾಹ್ಮಣರಿಗೆ ಭೋಜನ ಮಾಡಿಸಿ ಯಥಾಶಕ್ತಿ ಅವರ ಪೂಜೆ ಮಾಡಿ ದಾನಗಳನ್ನು ಕೊಡಬೇಕು.

ಅನೇಕ ಪ್ರಕಾರದ ಭಯಂಕರವಾದ ವಾದ್ಯಗಳ ವಾದನದ ಜೊತೆಗೆ ಅನೇಕ ಶಾಕಿನಿಯರೊಡಗೂಡಿ ಯಕ್ಷಿಣಿಯು ಸಾಧಕನ ಬಳಿಗೆ ಬಂದನಂತರ ವಾದನ ನಿಲ್ಲುವದು ಈ ಕಾಲಕ್ಕೆ ಸಾಧಕನು ಭಯಭೀತನಾಗಬಾರದು. ಯಕ್ಷಿಣಿಯು ೪೫ ವರ್ಷದ ಸ್ತ್ರೀ ರೂಪದಲ್ಲಿ ಬಂದು ಸಾಧಕನ ಬಳಿಯಿರುವ ಬಲಿಗಳನ್ನು ಸ್ವತಃ ತೆಗೆದುಕೊಂಡು ಹೋಗುವಳು ಆ ಸಮಯದಲ್ಲಿ ಸಾಧಕನು ಸಮಾಧಾನದಿಂದ ಇದ್ದರೆ ಯಕ್ಷಿಣಿಯು ಅಮೃತವನ್ನು ಕೊಡುವಳು ಅದರಿಂದ ಸಾಧಕನು ಅಮರತ್ವವನ್ನು ಪಡೆಯುವನಲ್ಲದೇ ಭೂತಭವಿಷ್ಯಗಳ ಜ್ಞಾನವುಂಟಾಗುವದ, ಮಾನ ಸನ್ಮಾನಗಳು ಅಧಿಕವಾಗಿ ಲಭಿಸುವವು.

# ಭೂತ ಸಾಧನೆಯು

ಭೂತ ಸಾಧನೆಯನ್ನು ಪ್ರಾರಂಭಿಸುವ ಮೊದಲು ಶಂಕರನನ್ನು ಆರಾಧಿಸಬೇಕಾಗುವದು. ನದಿಯ ದಂಡೆಯ ಮೇಲೆ ಒಂದು ದೊಡ್ಡ ನೆರಳಿನ ಗಿಡದ ಬುಡದಲ್ಲಿ ಒಂದು ಪಿಂಡಿಕೆಯನ್ನು ಸ್ಥಾಪಿಸಬೇಕು. ಅದರ ಸಮೀಪದಲ್ಲಿ ಒಂದು ಕೊಡವನ್ನು ಸ್ಥಾಪಿಸಬೇಕು, ಇವೆರಡರ ಪೂಜೆಯನ್ನು ವಿಧ್ಯುಕ್ತವಾಗಿ ಮಾಡಬೇಕು, ಪ್ರತಿನಿತ್ಯವೂ ನಿಯಮಿತವಾಗಿ ಪೂಜೆವುನಸ್ಕಾರಗಳನ್ನು ಮಾಡಿ ಭೂತ ಸಾಧನೆಯನ್ನು ಪುನಃ ಪ್ರಾರಂಭಿಸಬೇಕು.

ಮಂತ್ರಗಳು

## ಭೂತ ನಿವಾರಕ ಮಂತ್ರ

ಓಂ ನವೋ ಭಗವತೇ ರುದ್ರಾಯ ನಮಃ ಕ್ರೋಧೇಶ್ವರಾಯ ನಮಃ
ಜ್ಯೋತಿ ಪತಂಗಾಯ ನಮೋನಮಃ ಸಿದ್ಧರುದ್ರೊ ಲಾಪತಿ ಸ್ವಾಹಾ

ಈ ಮಂತ್ರವನ್ನು ಮೊದಲು ಹತ್ತುಸಾವಿರ ಸಲ ಜಪಿಸಿಕೊಂಡು ಮಂತ್ರದ ಸಿದ್ಧಿಯನ್ನು ಪಡೆಯಬೇಕು. ನಂತರ ಮಂತ್ರವನ್ನು ಪಠಿಸುತ್ತ ನವಿಲಿನ ಗರಿಯಿಂದ ಏಳು ಸಲ ಮೇಲೆ ಕೆಳಗೆ ಮಾಡಬೇಕು, ಅದರಿಂದ ಭೂತದ ನಿವಾರಣೆಯಾಗುವದೆಂಬುದರಲ್ಲಿ ಸ್ವಲ್ಪ ಸಹ ಸಂದೇಹವನ್ನು ಪಡಬೇಕಾಗಿಲ್ಲ.

## ಇನ್ನೊಂದು ಮಂತ್ರ

ದಿಗಂಬರ ದಿನಾನಾಥ ಯೋಗೇಂದ್ರ ಯೋಗವಲ್ಲಭಮ್
ಗಂಗಾಸಿಕರ ಸಶಕ್ರಿಮ್ ಯಶಮಂಡಲ ಮಂಡಿತಮ್

ಮೊದಲು ಈ ಮಂತ್ರವನ್ನು ೧೫೧ ಸಲ ಜಪಿಸಿಕೊಂಡು ಮಂತ್ರದ ಸಿದ್ಧಿಯನ್ನು ಪಡೆಯಬೇಕು. ತದನಂತರ ಯಾರಿಗೆ ಭೂತಬಾಧೆಯಾಗಿರು

ವದೋ ಅವರಿಗೆ ಮಂತ್ರವನ್ನು ಜಪಿಸುತ್ತ ನವಿಲಗರಿಯಿಂದ ೨೧ ಸಲ ಮಾರಿಯ ಮೇಲೆ ಆಡಿಸಬೇಕು ಆಗ ಭೂತಭಾದೆಯು ಸ್ವಲ್ಪ ಸಹ ಇಲ್ಲದಂತೆ ನಿವಾರಣೆ ಹೊಂದುವದೆಂಬುದು ಖಾತ್ರಿಯೆಂದು ತಿಳಿದುಕೊಳ್ಳಬೇಕು

## ಪ್ರೇತ ವಶೀಕರಣ ಮಂತ್ರ

ಓಂ ಪ್ರೇತಾದಿ ಪಿಶಾಚಾದಿ ಏಕಾನಿಕ ದ್ವಿಹಿಕ ಚತುರ್ಥಿಕ
ಪಂಚಮ ಬಾತಿಕ ಪೈಚಿಕ ಗೃಹದಾದಿ ಮುಚನುಚ ಸ್ವಾಹಾ

ಈ ಮಂತ್ರವನ್ನು ಮೊದಲು ೧೨೧ ಸಲ ಜಪಿಸಿ ಮಂತ್ರದ ಸಿದ್ಧಿಯನ್ನು ಮಾಡಿಕೊಳ್ಳಬೇಕು. ನಂತರ ಈ ಮಂತ್ರವನ್ನು ಜಪಿಸುತ್ತ ನವಿಲಗರಿಯಿಂದ ಮೋರೆಯ ಮೇಲೆ ಎಳೆಯಬೇಕು, ಆಗ ಪ್ರೇತವು ವಶದಲ್ಲಿ ಬಂದು ಯಾರ ಮೈಮೇಲೆ ಇರುವದೋ ಅವರ ಮುಖಾಂತರ ಮಾತನಾಡುವದು, ಇದರಲ್ಲಿ ಎಳ್ಳಷ್ಟು ಸಂದೇಹಕ್ಕಾಸ್ಪದವಿಲ್ಲ.

## ಇನ್ನೊಂದು ಮಂತ್ರ

ಓಂ ಸಾಲ ಸಲೀತಾ ಸೋಸಲವಾಯಿ ಕಾಗಪಡತಿ ಭಾಯಿ ಆಯಿ
ಓಂ ಲಂ ಲಂ ಲಂ ಠಃ ಠಃ

ಶನಿವಾರದಂದು ಅರ್ಧರಾತ್ರಿಯ ಸಮಯದಲ್ಲಿ ನಗ್ನರಾಗಿ ಗಿಡದ ಕೆಳಗೆ ಕುಳಿತು ಕಟ್ಟಿಗೆಯನ್ನು ಸುಡಬೇಕು, ಅಲ್ಲದೇ ಮಂತ್ರವನ್ನು ಪಠಿಸುತ್ತ ಕರಿಎಳ್ಳು ಉದ್ದುಗಳನ್ನು ಆಹುತಿ ಕೊಡಬೇಕು, ಆಗ ಪ್ರೇತವು ನಿಮ್ಮ ಬಳಿ ಬಂದು ಮಾತನಾಡತೊಡಗುವದು, ಆಗ ನಿಮ್ಮ ಕೈಯ ಏಳು ಹನಿ ರಕ್ತವು ನೆಲದ ಮೇಲೆ ಬೀಳುವಂತೆ ಮಾಡಿದಲ್ಲಿ ಪ್ರೇತವು ಸದಾ ನಿಮ್ಮ ವಶದಲ್ಲಿಯೇ ಉಳಿಯುವದು, ಇದು ಅತ್ಯಂತ ಖಾತ್ರಿಯೆಂದು ತಿಳಿಯಬೇಕು.

## ಭೂತ ವಶೀಕರಣ ಮಂತ್ರ

ಓಂ ಶ್ರೀ ಕಂ ವಂ ಭೂಂ ಭೂತೇಶ್ವರರಾಯ ಮಮ
ವಶ್ಯಂ ಕುರು ಕುರು ಸ್ವಾಹಾ

ಪ್ರಾತರ್ವಿಧಿಗೆ ಹೋದ ಸಮಯದಲ್ಲಿ ಸ್ವಲ್ಪನೀರನ್ನು ಉಳಿಸಿಕೊಂಡು ಬರಬೇಕು. ಈ ನೀರನ್ನು ಮೇಲಿನ ಮಂತ್ರದಿಂದ ೧೦೮ ಸಲ ಅಭಿಮಂತ್ರಿಸಿ ವಟವೃಕ್ಷದ ಮೇಲೆ ಸಂಪಡಿಸಬೇಕು, ಈ ರೀತಿ ನಾಲ್ವತ್ತು ದಿನಗಳ ವರೆಗೆ ಮಾಡಬೇಕು, ನಾಲ್ವತ್ತೊಂಬನೆಯ ದಿವಸ ನೀರನ್ನು ಸಿಂಪಡಿಸಬಾರದು. ಹಾಗೆಯೇ ಅಲ್ಲಿ ನಿಲ್ಲಬೇಕು, ಆಗ ಭೂತವು ಪ್ರಕಟವಾಗಿ ನೀರು ಕೊಡಬೇಕೆಂದು ನಿಮ್ಮನ್ನು ಕೇಳಿಕೊಳ್ಳುವದು. ಆಗ ನೀವು ನೀನು ನನಗೆ ವಶವಾಗಬೇಕೆಂದು ಕೇಳಿಕೊಂಡು ಆದರಿಂದ ಮೂರು ಸಲ ವಚನವನ್ನು ತೆಗೆದುಕೊಳ್ಳಬೇಕು, ನಂತರ ಅದಕ್ಕೆ ಪುನಃ ನೀರನ್ನು ಕೊಡಬೇಕು, ಮುಂದೆ ಮಾತ್ರ ಭೂತಕ್ಕೆ ಪ್ರತಿ ದಿವಸ ನೀರನ್ನು ಕೊಡುತ್ತ ಹೋಗಬೇಕು, ಎಂದಾದರೂ ನಿಮಗೆ ನೀರು ಕೊಡುವದು ಸಾಧ್ಯವಿಲ್ಲದಿದ್ದಲ್ಲಿ ಆ ರೀತಿ ಅದಕ್ಕೆ ಮೊದಲೇ ಸೂಚನೆಯನ್ನು ಕೊಟ್ಟು ಇಟ್ಟಿರಬೇಕು. ಇದರಿಂದ ಆ ಭೂತವು ಶಾಶ್ವತವಾಗಿ ನಿಮ್ಮ ವಶದಲ್ಲಿಯೇ ಉಳಿದು ನೀವು ಹೇಳಿದ ಹೊತ್ತಿಗೆ ನಿಮ್ಮೆದುರು ಪ್ರತ್ಯಕ್ಷವಾಗುವದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಇದಲ್ಲದೇ ಆದಿತ್ಯವಾರ ದಿವಸ ಆಲದ ಗಿಡದ ಕೆಳಗೆ ಕುಳಿತುಕೊಂಡು ಈ ಮೇಲಿನ ಮಂತ್ರವನ್ನು ಒಂದೂವರಿ ಲಕ್ಷ ಸಲ ಜಪಿಸಬೇಕು, ಈ ರೀತಿ ಎಂಟು ದಿನಗಳ ವರೆಗೆ ಮಾಡಲಾಗಿ ಭೂತವು ನಿಮಗೆ ವಶವಾಗುವದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

## ಭೂತ ಆಕರ್ಷಣ ಮಂತ್ರ

ಓಂ ಹ್ರೀಂ ಹ್ರೂಂ ಹ್ರಂ ಹ್ರಂ ರಂ ಲಂ ಗಂ ಭೂತಾಯನಮಃ ಸ್ವಾಹಾ

ವಿಶಾಖಾ ನಕ್ಷತ್ರದಂದು ಶುಭಯೋಗವಿರುವ ಸಮಯವನ್ನು ಸಾಧಿಸಿಕೊಂಡು ಈ ಮೇಲಿನ ಮಂತ್ರವನ್ನು ಒಂದೂವರಿ ಲಕ್ಷಸಲ ಜಪಿಸಬೇಕು, ಶನಿವಾರ ದಿವಸ ನಾಯಿಗಳಿಗೆ ಊಟಕ್ಕೆ ಹಾಕಬೇಕು, ಈ ರೀತಿಯಾಗಿ ೧೫ ಸಲ ನಡೆಸಿದ್ದಾದಲ್ಲಿ ಮಂತ್ರದ ಸಿದ್ಧಿಯು ದೊರೆಯುವದು, ಆಗ ಭೂತವು

ಆಕರ್ಷಿತವಾಗಿ ನಿಮ್ಮ ಬಳಿಗೆ ಬಂದು ನಿಮ್ಮ ಆಜ್ಞೆಯನ್ನು ಪಾಲಿಸುತ್ತ ಹೋಗುವದು, ಇದರಲ್ಲಿ ಯಾವದೇ ಸಂದೇಹಕ್ಕೆ ಆಸ್ಪದವಿರುವದಿಲ್ಲ ಮತ್ತು ಇದು ಖಾತ್ರಿ ಎಂದು ತಿಳಿದುಕೊಳ್ಳಿರಿ.

## ಭೂತ ಬಾಧಾನಾಶಕ ಪ್ರಯೋಗ

ಬಾಳದ ಬೇರು, ಚಂದನ, ತಗರ ಹೂಗಿಡದ ಬೇರು , ಕೆಂಪು ಚಂದನಗಳನ್ನು ಸೇರಿಸಿ ಒಂದು ಚೂರ್ಣವನ್ನು ಸಿದ್ಧಪಡಿಸಬೇಕು, ನಂತರ ಓಂ ನಮೋ ಭಗವತೆ ಉಡ್ಡಾಮರೇಶ್ವರಾಯ ಕುಹೊನಿ ಕವರ್ತಿ ಸ್ವಾಹಾ ಎಂಬ ಮಂತ್ರದಿಂದ ಈ ಚೂರ್ಣವನ್ನು ಅಭಿಮಂತ್ರಿಸಬೇಕ, ನಂತರ ಅದನ್ನು ಮೈಗೆಲ್ಲ ಲೇಪಿಸಬೇಕು, ಆಗ ಮೈಮೇಲಿರುವ ಭೂತವು ತಾವಾಗಿಯೇ ಬಿಟ್ಟುಕೊಟ್ಟು ಹೋಗುವದೆಂಬಲ್ಲಿ ಸಂಶಯವಿಲ್ಲ.

## ಭೂತ ಆಕರ್ಷಣ ಪ್ರಯೋಗ

ರವಿವಾರ ದಿವಸ ಪುಷ್ಯನಕ್ಷತ್ರವು ಬಂದಿರುವಂತಹ ದಿನವನ್ನು ಸಾಧಿಸಬೇಕು, ಆ ಯೋಗದಲ್ಲಿ ಗಿಡದ ಬೀಜಗಳನ್ನು ಸಂಪಾದಿಸಬೇಕು, ಅವನ್ನು ತಿನ್ನುವ ವೀಳ್ಯೆದೆಲೆಯ ರಸದಲ್ಲಿ ಸೇರಿಸಿ ಮೂರು ಧಾತುಗಳಿಂದ ಸಿದ್ಧಪಡಿಸಿದ ಪಾತ್ರೆಯಲ್ಲಿರಿಸಬೇಕು, ನಂತರ ಭೂತ ಆಕರ್ಷಣ ಮಂತ್ರವಾದ 'ಓಂ ಶ್ರೀಂ ಬ್ರಂ ಬಂ ಭೂ ಭೂತೇಶ್ವರಿ ಮಮ ಕುರು ಕುರು ಸ್ವಾಹಾ, ಎಂಬುದನ್ನು ಜಪಿಸಬೇಕು. ತದನಂತರ ಆಹುತಿಯನ್ನು ಕೊಡಬೇಕು. ಆಗ ಭೂತವು ಆಕರ್ಷಿತವಾಗಿ ಬರುವದೆಂಬುದು ಸುನಿಶ್ಚಿತವಾದುದು.

## ಡಾಕಿಣಿ ನಿವಾರಕ ಮಂತ್ರ

ಓಂ ನಮೋ ಮಹಾಕಾಯ ಯೋಗಿನಿ ಪಾರಶಾಕಿನಿ
ಕಲ್ಪವೃಕ್ಷಾಯ ದೃಷ್ಟಿಯೋಗಿನಿ ಸಿದ್ದಿ ರುದ್ರಾಯ ಕಾಲರಂಭೇನ
ಸಾಧಯ ಸಾಧಯ ಮಾರಯ ಮಾರಯ ಚೂರಯ ಚೂರಯ
ಅಪಹರ ಶಾಕಿನಿ ಸಪರಿವಾರ ನಮಃ

ಓಂ ಭಃ ಓಂ ಹ್ರೀಂ ಭಃ ಹ್ರೀಂ ಹ್ರೀಂ ಹ್ರೋಂ ಫಟ್ ಸ್ವಾಹಾ

ಗುಗ್ಗಳವನ್ನು ತೆಗೆದುಕೊಂಡು ಈ ವೇಲಿನ ಮಂತ್ರದಿಂದ ಅಭಿಮಂತ್ರಿಸುತ್ತ ಹೊಗೆಯನ್ನು ಹಾಕಬೇಕು. ಆಗ ಡಾಕಿನಿಯು ಯಾರ ಮೈಮೇಲಿರುವಳೋ ಅವರಿಂದ ಸರಳವಾಗಿ ಇಳಿದು ಹೋಗುವಳು

ಇದಲ್ಲದೇ ನೀರನ್ನು ಈ ಮಂತ್ರದಿಂದ ಅಭಿಮಂತ್ರಿಸಿ ಯಾರ ಮೈಮೇಲೆ ಡಾಕಿಣಿ ಇರುವಳೋ ಅವರ ಕಣ್ಣಿಗೆ ಚಿಮುಕಿಸಬೇಕು. ಆಗ ಡಾಕಿಣಿಯು ನಿರಾಯಾಸವಾಗಿ ಅವರನ್ನು ಬಿಟ್ಟು ಹೋಗುವಳು. ಇದು ಖಾತ್ರಿ ಎಂದು ತಿಳಿಯಿರಿ.

ಯಂತ್ರಗಳು

## ಸರ್ವಬಾಧಾ ನಿವಾರಕ ಮಂತ್ರ

| | | | |
|---|---|---|---|
| ಕ | ಕ | ಕ | ಕ |
| ಕ | ಕ | ಕ | ಕ |
| ಕ | ಕ | ಕ | ಕ |
| ಕ | ಕ | ಕ | ಕ |

ಹೊಸ ಅರಿವೆಯ ಮೇಲೆ ಬಣ್ಣದ ಪೆನ್ಸಿಲಿನಿಂದ ಈ ಮಂತ್ರವನ್ನು ಬರೆಯಬೇಕು. ನಂತರ ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಮಿಷ್ಟಾನ್ನಭೋಜನವನ್ನು ಮಾಡಿಸಬೇಕು, ಇಷ್ಟೆಲ್ಲ ಆದ ನಂತರ ಈ ಯಂತ್ರವನ್ನು ಭೂಮಿಯ ಮೇಲೆ ಇರಿಸಬೇಕು, ಅದರ ಮೇಲೆ ಖಾಯಿರ ಕಟ್ಟಿಗೆಯ ತುಂಡನ್ನು ಇರಿಸಬೇಕು. ಮತ್ತು ಅದಕ್ಕೆ ಬೆಂಕಿ ಹಚ್ಚಬೇಕು. ಇದರಿಂದ ಭೂತಪ್ರೇತ ಡಾಕಿಣಿ ಇತ್ಯಾದಿಗಳೆಲ್ಲದರ ಸರ್ವ ಬಾಧೆಯ ನಿವಾರಣೆಯಾಗುವದೆಂಬುದು ಖಾತ್ರಿ ಎಂದು ತಿಳಿದುಕೊಳ್ಳಿರಿ.

## ಭೂತ ನಿವಾರಕ ಮಂತ್ರ

| | | | |
|---|---|---|---|
| ೬ | ೩ | ೮೪ | ೮೩ |
| ೮೦ | ೮೨ | ೨ | ೭ |
| ೪ | ೫ | ೬೦ | ೬೩ |
| ೮೬ | ೮೧ | ೮ | ೧ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು, ಅದಕ್ಕೆ ಊದಬತ್ತಿಯ ಹೊಗೆಯನ್ನು ಕೊಡಬೇಕು, ಯಾರಿಗೆ ಭೂತವು ಬಾಧಿಸುತ್ತಿರುವದೋ ಅವರಕೊರಳಲ್ಲಿ ಈ ಮಂತ್ರವನ್ನು ಕಟ್ಟಬೇಕು ಅಂದರೆ ಅವರ ಮೈಮೇಲೆ ಇರುವ ಭೂತವು ತಾನಾಗಿಯೇ ನಿವಾರಣೆ ಹೊಂದುವದು. ಇದರಲ್ಲಿ ಯಾವದೆ ರೀತಿ ಸಂದೇಹಪಡಬೇಕಾಗಿಲ್ಲ.

## ಪ್ರೇತಬಾಧಾ ನಿವಾರಕ ಮಂತ್ರ

| | | | |
|---|---|---|---|
| ಓಂ | ಹ್ರೀಂ | ಸ್ವ | ಮ |
| ಕ್ರೀಂ | ಕ್ರೀಂ | ಲಂ | ಜಂ |
| ತಂ | ಪಂ | ಸಂ | ತಂ |
| ಠಂ | ಠಂ | ಠಂ | ಠಂ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ನಂತರ ಯಾರಿಗೆ ಪ್ರೇತಬಾಧೆಯಿರುವದೋ ಅವರ ಕೊರಳಲ್ಲಿ ಈ ಯಂತ್ರವನ್ನು ಕಟ್ಟಬೇಕು. ಆಗ ಅವರ ಮೈಮೇಲೆ ಇರುವ ಪ್ರೇತವು ಓಡಿ ಹೋಗಿ ಅವರು ಪ್ರೇತಬಾಧೆಯಿಂದ ಸಂಪೂರ್ಣವಾಗಿ ನಿವಾರಣೆ ಹೊಂದುವರೆಂಬಲ್ಲಿ ಯಾವದೇ ರೀತಿ ಸಂದೇಹಪಡುವ ಕಾರಣವಿಲ್ಲ.

## ಭೂತ ಭೀತಿ ನಾಶಕ ಯಂತ್ರ

| | | | |
|---|---|---|---|
| ೧ | ೯ | ೨೧ | ೯೬ |
| ೮ | ೨ | ೯ | ೮೬ |
| ೯೨ | ೯೫ | ೩ | ೭ |
| ೯೪ | ೯೧ | ೬ | ೪ |

ಈ ಯಂತ್ರವನ್ನು ಭೋಜಪತ್ರದ ಮೇಲೆ ಗೋಪಿಚಂದನದಿಂದ ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ನಂತರ ಹುಡುಗರ ಕೊರಳಲ್ಲಿ ಕಟ್ಟಬೇಕು. ಅಂದರೆ ಆ ಹುಡುಗರಿಗೆ ಭೂತ ಬಾಧೆಯಾಗುವ ಭೀತಿ ಸ್ವಲ್ಪ ಸಹ ಇರುವದಿಲ್ಲವೆಂಬುದು ಅತ್ಯಂತ ನಿಶ್ಚಿತವೆಂದು ತಿಳಿಯಬೇಕು.

## ಭೂತಪ್ರೇತ ನಾಶಕ ಯಂತ್ರ

| | | | |
|---|---|---|---|
| ೧೫ | ೫೬ | ೯ | ೧೨ |
| ೧ | ೬೧ | ೬೨ | ೧೪ |
| ೪೬ | ೪ | ೧೮ | ೯೩ |
| ೮ | ೬೭ | ೨೮ | ೫೮ |

ಭೋಜಪತ್ರದ ಮೇಲೆ ಅಶ್ವಗಂಧ ದಿಂದ ಈ ಯಂತ್ರವನ್ನು ಬರೆಯ ಬೇಕು. ನಂತರ ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಅದನ್ನು ಮನೆಯಲ್ಲಿರಿಸಿ ಕೊಳ್ಳುವದರಿಂದ ಭೂತಪ್ರೇತಗಳ ನಾಶವಾಗುವ ದೆಂಬುದರಲ್ಲಿ ಸ್ವಲ್ಪವೂ ಸಂದೇಹ ವಿರುವದಿಲ್ಲ.

ಬೆಳ್ಳಿಯ ಪಾತ್ರೆಯ ಮೇಲೆ ಸ್ಮಶಾನದಮಣ್ಣಿನಿಂದ ಈ ಯಂತ್ರವನ್ನು ಬರೆದು ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ನಂತರ ಯಾರಿಗೆ ಭೂತ ಇಲ್ಲವೇ ಪ್ರೇತದ ಬಾಧೆಯಾಗಿರುವದೋ ಅವನ ತಲೆಯ ಮೇಲೆ ಎರಡು ನಿಮಿಷಗಳ ವರೆಗೆ ಈ ಯಂತ್ರವನ್ನು ಇರಿಸಬೇಕು, ನಂತರ ಅದನ್ನು

ಕೆರೆಗೆ ಹೋಗಿ ಅಲ್ಲಿ ಮುಳುಗಿಸಿ ಬರಬೇಕು, ಆಗ ಅವನನ್ನು ಬಡಿದು ಕೊಂಡಂತಹ ಭೂತವಾಗಲಿ, ಪ್ರೇತವಾಗಲಿ ಹೇಳದೇ ಕೇಳದೇ ಓಡಿ ಹೋಗುವದೆಂದು ಖಾತ್ರಿಯಾಗಿ ತಿಳಿದುಕೊಳ್ಳಿರಿ.

## ಡಾಕಿನಿಯ ಯಂತ್ರವು

| | | | |
|---|---|---|---|
| ೮೦ | ೬೪ | ೬೧ | ೧೭ |
| ೫೭ | ೧೩ | ೬೯ | ೫೩ |
| ೬೭ | ೬೧ | ೧೨ | ೧೧ |
| ೩೪ | ೨೯ | ೫೬ | ೬೫ |

ಸಿಂಬೆಹಣ್ಣಿನರಸದಿಂದ ಈ ಯಂತ್ರವನ್ನು ಒಂದು ಕಾಗದದ ಮೇಲೆ ಬರೆಯಬೇಕು. ವಿಧ್ಯುಕ್ತವಾಗಿ ಅದನ್ನು ಪೂಜಿಸಿ ಸ್ಮಶಾನಕ್ಕೆ ಹೋಗಿ ಪೀಪಲ ಗಿಡದ ಕೆಳಗೆ ಒಗೆದು ಬರಬೇಕು. ಈ ಕಾಲಕ್ಕೆ ಯಾವದೇ ರೀತಿಯಲ್ಲಿ ಭಯವನ್ನಾಗಲಿ, ಭೀತಿಯನ್ನಾಗಲಿ ವ್ಯಕ್ತಪಡಿಸಬಾರದು. ಹೀಗೆ ಒಗೆದು ಬಂದ ನಂತರ ಈ ಯಂತ್ರದ ಪ್ರಯೋಗವನ್ನು ಯಾರು ಮಾಡಿರುವರೋ ಅವರ ಬಳಿಗೆ ಸರ್ವ ಡಾಕಿನಿಯರು ಬರುವರೆಂಬುದು ನಿಶ್ಚಿತವಾದುದೆಂದು ತಿಳಿಯಬೇಕು.

ಕೋಗಿಲೆಯ ಚರ್ಮದ ಮೇಲೆ ಖೈರಗಿಡದ ಕಟ್ಟಿಗೆಯಿಂದ ಈ ಯಂತ್ರವನ್ನು ಬರೆದು ವಿಧ್ಯುಕ್ತವಾಗಿ ಪೂಜಿಸಬೇಕು. ಆಗ ಎಲ್ಲ ಡಾಕಿನಿಯರು ಈ ರೀತಿ ಬರೆದವರ ವಶದಲ್ಲಿ ಬರುವರೆಂಬುದು ಅತ್ಯಂತ ಖಾತ್ರಿಯೆಂದು ತಿಳಿದುಕೊಳ್ಳಬೇಕು.

## ಭೂತದರ್ಶಕ ಯಂತ್ರ

| | | | |
|---|---|---|---|
| ೯೩ | ೩೩ | ೨೬ | ೪೬ |
| ೪೧ | ೬೭ | ೫೩ | ೬೧ |
| ೪೪ | ೧೯ | ೩೨ | ೭೧ |
| ೬೪ | ೫೪ | ೨೭ | ೯೬ |

ಕಾಗದದ ಮೇಲೆ ಸ್ಮಶಾನದಮಣ್ಣಿನಿಂದ ಈ ಯಂತ್ರವನ್ನು ಬರೆಯಬೇಕು. ಅದನ್ನು ನಿಮ್ಮ ಚಾಪೆಯ ಕೆಳಗಿರಿಸಿಕೊಳ್ಳಬೇಕು. ಅಂದು ರಾತ್ರಿ ಭೂತ ದರ್ಶನವಾಗುವದು ಸುನಿಶ್ಚಿತವಾಗಿದೆ.

## ಸ್ತಂಭನ ಕರ್ಮದ ಸಾಧನೆಯು

ಯಾವದೇ ವಸ್ತುವು ತನ್ನ ಸ್ಥಳದಲ್ಲಿಯೇ ನಿಲ್ಲುವಂತೆ ಮಾಡುವದೇ ಸ್ತಂಭನ ಕರ್ಮ ಸಾಧನೆಯ ಉದ್ದೇಶವಾಗಿರುವದು. ಈ ಸಾಧನೆಯಿಂದ ನಿಂತ ವಸ್ತುವನ್ನು ನಿಂತಲ್ಲಿಯೇ ನಿಲ್ಲಿಸಿಬಿಡಬಹುದಾಗಿರುವದು, ! ಆದರೆ ಇದನ್ನೊಂದೇ ಉಪಯೋಗಿಸಲಾಗುವದಿಲ್ಲ. ಮೋಹನ ಕರ್ಮದ ಸಾಧನೆಯೊಂದಿಗೆ ಈ ಶಕ್ತಿಯ ಉಪಯೋಗವನ್ನು ಮಾಡಬೇಕಾಗುವದೆಂಬದನ್ನು ಮುಖ್ಯವಾಗಿ ನೆನಪಿನಲ್ಲಿರಿಸಿಕೊಳ್ಳಬೇಕಾದ ಸಂಗತಿಯಾಗಿದೆ.

ಮಂತ್ರಗಳು

### ಅಗ್ನಿಸ್ತಂಭನ ಮಂತ್ರ

ಓಂ ನಮೋ ಅಗ್ನಿರೂಪಾಯ ಮಮ ಶರೀರ ಸ್ತಂಭನ ಕುರು ಕುರು ಸ್ವಾಹಾ

ಈ ಅಗ್ನಿಸ್ತಂಭನ ಮಂತ್ರವನ್ನು ಮೊದಲು ಹತ್ತು ಸಾವಿರ ಸಲ ಜಪಿಸ ಬೇಕು, ಆಗ ಮಂತ್ರದ ಸಿದ್ಧಿಯಾಗುವದು. ಈ ಮಂತ್ರವನ್ನು ಪ್ರಯೋಗಿ ಸುವ ಕಾಲದಲ್ಲಿ ೧೦೮ ಸಲ ಜಪಿಸಿದ ನಂತರ ಪ್ರಯೋಗ ಮಾಡಿದಲ್ಲಿ ಅದು ಸಿದ್ಧಿ ಹೊಂದುವದು, ಹೆಚ್ಚಾಗಿ ದೀಪಾವಳಿಯ ಸಮಯದಲ್ಲಿ ಈ ಮಂತ್ರದ ಉಪಯೋಗ ಮಾಡಿಕೊಳ್ಳುವದನ್ನು ಮರೆಯಬಾರದು.

## ಶತ್ರುಬುದ್ದಿ ಸ್ದಂಭನ ಮಂತ್ರ

ಓಂ ನವೋ ಭಗವತೆ (ಶತ್ರೂಣಾಂ) ಬುದ್ಧಿಂ
ಸ್ತಂಭಯ ಸ್ತಂಭಯ ಸ್ವಾಹಾ।

ಮೊದಲು ಒಂದು ಲಕ್ಷ ಸಲ ಜಪಿಸಿದರೆ ಈ ಮಂತ್ರದ ಸಿದ್ಧಿ ಆಗು ವದು. ಮಂತ್ರದ ಸಿದ್ಧಿ ದೊರೆತು ಅದನ್ನು ಪ್ರಯೋಗಿಸುವ ಕಾಲದಲ್ಲಿ ೧೦೮ ಸಲ ಜಪಿಸಬೇಕು, ಆಗ ಪ್ರಯೋಗದ ಸಿದ್ಧಿಯು ದೊರೆಯುವದು. ಈ ಮಂತ್ರವನ್ನು ಪ್ರಯೋಗ ಮಾಡುವ ಕಾಲದಲ್ಲಿ ಶತ್ರುಣಾಂ ಎಂದು ಬರೆ ದಲ್ಲಿ ಶತ್ರುವಿನ ಹೆಸರನ್ನು ತೆಗೆದುಕೊಳ್ಳಬೇಕು, ಅಂದರೆ ನಿಮ್ಮ ಶತ್ರುವಿನ ಬುದ್ಧಿ ಸ್ತಂಭವಾಗಿ ಕುಸಿದು ಬೀಳುವದರಲ್ಲಿ ಯಾವ ಸಂದೇಹವೂ ಇಲ್ಲ.

## ದೃಷ್ಟಿಸ್ತಂಭನ ಮಂತ್ರ

ಓಂ ನವೋ ಭಗವತೆ ವಾಸುಚಿ (ಹೆಸರು) ಸ್ಯ ದೃಷ್ಟಿಸ್ತಂಭಯ ಸ್ತಂಭಯ ನಾಗಿನಿ ಸ್ವಾಹಾ

ಆದಿತ್ಯವಾರದಂದು ಪುಷ್ಯನಕ್ಷತ್ರದ ಯೋಗವಿರುವದನ್ನು ಸಾಧಿಸ ಬೇಕು, ಜಾಲಿ ಗಿಡದ ಟೊಂಗೆಯನ್ನು ತರಬೇಕು, ಸ್ಥಳವನ್ನು ಸ್ವಚ್ಛಗೊಳಿಸಿ ಅದರ ಮೇಲೆ ಆ ಕಟ್ಟಿಗೆಯನ್ನು ಇಡಬೇಕು, ಅದನ್ನು ಧೂಪದೀಪಾದಿ ಗಳಿಂದ ಪೂಜಿಸಬೇಕು. ನೈವೇದ್ಯವನ್ನು ತೋರಿಸಬೇಕು, ತದನಂತರ ಈ ಮೇಲೆ ಹೇಳಿದ ಮಂತ್ರದಿಂದ ೧೦೮ ಸಲ ಈ ಕಟ್ಟಿಗೆಯನ್ನು ಅಭಿ ಮಂತ್ರಿಸಬೇಕು. ಈ ಮಂತ್ರವನ್ನು ಪ್ರಯೋಗಿಸುವ ಸಮಯದಲ್ಲಿ ಯಾರ

ಮೇಲೆ ಪ್ರಯೋಗಿಸಬೇಕಾಗಿರುವದೋ ಅವರ ಹೆಸರನ್ನು ತೆಗೆದುಕೊಂಡು ಈ ಕಟ್ಟಿಗೆಯನ್ನು ತಿರುವಬೇಕು, ಯಾರ ಕಣ್ಣ ಮುಂದೆ ಮತ್ತು ಯಾರ ಹೆಸರನ್ನು ತೆಗೆದುಕೊಂಡು ಈ ಲಾಠಿಯನ್ನು ತಿರುವುವಿರೋ ಅವರದೃಷ್ಟಿಯು ಸ್ತಂಭಿತವಾಗುವದು, ಅರ್ಥಾತ್ ಅವರು ಅಂಧರಾಗುವರು. ಇದರಲ್ಲಿ ಯಾವದೇ ರೀತಿ ಸಂದೇಹಕಾಸ್ಪದವಿಲ್ಲ.

## ಶತ್ರು ಸ್ತಂಭನ ಮಂತ್ರ

ಓಂ ನಮೋ ವಿಕರಾಲ ರೂಪಾಯ ಮಹಾಬಲಾಯ
ಪರಾಕ್ರಮಾಯ ಶತ್ರೋರ್ಭುಜ ಬಲಂ ಬಂಧಯ ಬಂಧಯ
ದೃಷ್ಟಿ ಸ್ತಂಭಯ ಪಾತಯ ಪಾತಯ
ಮಹೀತತಿ ಹೊಂ ಫಟ್ ಸ್ವಾಹಾ

ಒಂದು ಲಕ್ಷ ಸಲ ಈ ಮಂತ್ರದ ಜಪವನ್ನು ಮಾಡಬೇಕು. ಅಂದರೆ ಮಂತ್ರವ ಸಿದ್ಧಿಯು ಪ್ರಾಪ್ತವಾಗುವದು, ತದನಂತರ ಈ ಮಂತ್ರವನ್ನು ಪ್ರಯೋಗಿಸಬೇಕಾದ ಕಾಲದಲ್ಲಿ ೧೦೮ ಸಲ ಜಪಿಸಬೇಕು. ಆಗ ಪ್ರಯೋಗವು ಸಿದ್ಧವಾಗುವದು, ಇದರಿಂದ ಶತ್ರುವಿನ ಸ್ತಂಭನವಾಗುವದು. ಇದು ಖಾತ್ರಿಯೆಂದು ತಿಳಿದುಕೊಳ್ಳಬೇಕು, ಯಾವದೇ ರೀತಿ ಸಂದೇಹಕ್ಕಾಸ್ಪದವಿಲ್ಲ

## ಜಲಸ್ತಂಭನ ಮಂತ್ರ

ಓಂ ನಮೋ ಭಗವತೆ ರುದ್ರಾಯ ಜಲಸ್ತಂಭಯ ಠಃ ಠಃ

ಮೊದಲು ಒಂದು ಲಕ್ಷಸಲ ಜಪಿಸಬೇಕು- ಮಂತ್ರಸಿದ್ಧಿಯಾಗುವದು, ಪ್ರಯೋಗದ ಕಾಲಕ್ಕೆ ೧೦೮ ಸಲ ಜಪಿಸಿದರೆ ಪ್ರಯೋಗ ಸಿದ್ಧ ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲ.

## ಇನ್ನೊಂದು ಮಂತ್ರ

ಓಂ ನಮೋ ಭಗವತೆ ಜಲಸ್ತಂಭನ ಕುರು ಕುರು ಹೊಂ ಫಟ್ ಸ್ವಾಹಾ।

ವಿಧ್ಯುಕ್ತವಾಗಿ ತೈಲವನ್ನು ಸಿದ್ದಮಾಡಿಕೊಳ್ಳಬೇಕು, ಕೃಷ್ಣಪಕ್ಷದ ಅಷ್ಟಮಿ ದಿನದಂದು ಈ ತೇಲವನ್ನು ಲೋಹದ ಪಾತ್ರೆಯಲ್ಲಿರಿಸಬೇಕು, ಒಂದು ನೂರುಸಲ ಮಂತ್ರ ಜಪಿಸುತ್ತ ಎಂಟುಸಲ ತುಪ್ಪದಿಂದ ಹವನವನ್ನು ಮಾಡಬೇಕು ಈ ಮಂತ್ರದಿಂದ ಸ್ಪರ್ಶಿಸಲಾಗಿ ಜಲವು ಸ್ಥಿರವಾಗುವದೆಂಬ ದರಲ್ಲಿ ಯಾವ ಸಂದೇಹವೂ ಇಲ್ಲ.

## ಗರ್ಭಸ್ತಂಭನ ಮಂತ್ರ

ಓಂ ನಮೊ ಭಗವತೆ ಮಹಾರುದ್ರಾಯ ಗರ್ಭಸ್ತಂಭನ ಕುರು ಕುರು ಸ್ವಾಹಾ।

ಮೊದಲು ಈ ಮಂತ್ರವನ್ನು ಒಂದೂಕಾಲು ಲಕ್ಷಸಲ ಜಪಿಸಿದರೆ ಮಂತ್ರದ ಸಿದ್ಧಿಯು ಪ್ರಾಪ್ತವಾಗುವದು. ತದನಂತರ ಪ್ರಯೋಗವನ್ನು ಮಾಡುವ ಕಾಲಕ್ಕೆ ೧೦೮ ಸಲ ಜಪಿಸಿದರೆ ಕಾರ್ಯ ಸಿದ್ಧಿಯು ಆಗುವದು ಅಂದರೆ ಗರ್ಭವು ಸ್ಥಿರವಾಗಿ ನಿಲ್ಲುವದು, ಗರ್ಭಿಣಿ ತನ್ನ ಗರ್ಭದ ಬಗೆಗೆ ಯಾವದೇ ರೀತಿಯಿಂದ ಚಿಂತಿಸುವ ಕಾರಣವಿಲ್ಲ.

## ವೀರ್ಯಸ್ತಂಭನ ಮಂತ್ರ

ಓಂ ನಮೋ ಭಗವತೆ ಮಹಾಬಲ ಪರಾಕ್ರಮಾಯ
ಮನೋಭಿಲಷಿತ ಸ್ತಂಭನ ಕುರು ಕುರು ಸ್ವಾಹಾ

ಒಂದು ಲೋಟದ ತುಂಬ ಹಾಲನ್ನು ತೆಗೆದುಕೊಳ್ಳಬೇಕು, ಈ ಮೇಲೆ ತಿಳಿಸಿದ ಮಂತ್ರದಿಂದ ೧೦೮ ಸಲ ಅಭಿಮಂತ್ರಿಸಬೇಕು, ನಂತರ ಆ ಹಾಲನ್ನು ತೆಗೆದುಕೊಳ್ಳಬೇಕು, ಅಂಪರೆ ರತಿಕ್ರೀಡೆಯ ಕಾಲದಲ್ಲಿ ವೀರ್ಯ

ಸ್ತಂಭನವಾಗುವದು. ಬಹಳ ಹೊತ್ತಿನ ವರೆಗೆ ಸ್ಖಲನವಾಗದೇ ನಿಮಗೆ ರತಿಕ್ರೀಡೆಯಿಂದ ಸಿಗಬೇಕಾದ ಸುಖ ದೊರೆತು ಬಹಳಷ್ಟು ಆನಂದವುಂಟಾಗುವದು.

## ನಿದ್ರಾಸ್ತಂಭನ ಮಂತ್ರ

ಓಂ ನಮೋ ಭಗವತೆ ರುದ್ರಾಯ ನಿದ್ರಾಂಸ್ತಂಭಯ ಸ್ತಂಭಯ ಠಃ ಠಃ ಠಃ

ಇದು ನಿದ್ರೆಯನ್ನು ಸ್ತಂಭನಗೊಳಿಸುವ ಅಂದರೆ ನಿಲ್ಲಿಸುವ ಮಂತ್ರವಾಗಿದ್ದು ೧೦೮ ಸಲ ಜಪಿಸುವದರಿಂದ ಮಂತ್ರದ ಸಿದ್ಧಿಯಾಗುವದು ನಂತರ ಪ್ರಯೋಗ ಕಾಲದಲ್ಲಿ ಮತ್ತೆ ಇಷ್ಟೇ ಸಲ ಜಪಿಸಬೇಕಾಗುವದು.

<u>ಪ್ರಯೋಗಗಳು</u>

## ಅಗ್ನಿಸ್ತಂಭನ ಪ್ರಯೋಗ

ಕಪ್ಪೆಯ ಚರಬಿ ಮತ್ತು ಕರ್ಪೂರ ಇವುಗಳ ಮಿಶ್ರಣವನ್ನು ಮಾಡಿಕೊಂಡು ಅದನ್ನು ಮೈಗೆ ಲೇಪಿಸಿಕೊಂಡಲ್ಲಿ ಅಗ್ನಿಸ್ತಂಭನವಾಗಿ ನಿಮಗೆ ಅಗ್ನಿಯಿಂದ ಯಾವದೇ ತೊಂದರೆಯಾಗುವದಿಲ್ಲ

ಏಡಿ ಮೊದಲಾದ ಗುಂಪಿನ ಪ್ರಾಣಿಗಳ ರಸ ಮತ್ತು ಕಪ್ಪೆಯಚರಬಿಯನ್ನು ಸೇರಿಸಿ ಅವುಗಳ ಮಿಶ್ರಣವನ್ನು ಸಿದ್ಧಪಡಿಸಬೇಕು, ಅದನ್ನು ಮೈಗೆ ಹಚ್ಚಿಕೊಳ್ಳಬೇಕು, ಅದರಿಂದ ನಿಮಗೆ ಅಗ್ನಿಯ ಸ್ಪರ್ಶವಾಗಲಾರದು.

ಕೋರಪಡಿಯ ರಸವನ್ನು ಯಾವದಾದರೂ ವಸ್ತುವಿನ ಮೇಲೆ ಲೇಪಿಸಿದಲ್ಲಿ ಅದು ಅಗ್ನಿಯಲ್ಲಿಟ್ಟರೂ ಸುಡುವದಿಲ್ಲವೆಂದು ತಿಳಿದುಕೊಳ್ಳಬೇಕು.

ಕೋರಪಡಿಯ ರಸ, ಬಾಳೆಹಣ್ಣಿನ ರಸ ಮತ್ತು ಸಾಸುವೆಯ ಹಾಲು ಇವನ್ನೆಲ್ಲ ಸೇರಿಸಿ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು. ಅದನ್ನು ನಿಮ್ಮ

ನೈಗೆಲ್ಲ ಹಚ್ಚಿಕೊಳ್ಳಬೇಕು, ಆಗ ನಿಮಗೆ ಅಗ್ನಿಯಿಂದ ಯಾವದೇ ತರಹದ ಭೀತಿ ಉಳಿಯ ವದಿಲ್ಲವೆಂಬದು ಅತಿ ಖಾತ್ರಿ ಎಂದು ತಿಳಿಯಬೇಕು.

## ಮನುಷ್ಯಸ್ತಂಭನ ಪ್ರಯೋಗ

ಮನುಷ್ಯನ ತಲೆಬುರುಡೆಯಲ್ಲಿ ಕರಿಮಣ್ಣನ್ನು ಹಾಕಬೇಕು, ಬಿಳಿಯ ಗುಲಗಂಜಿಗಳನ್ನು ಸ್ವಲ್ಪ ಸ್ವಲ್ಪ ಹಾಕಬೇಕು, ದಿನಾಲು ಅದಕ್ಕೆಹಾಲು ಹಾಗೂ ನೀರಿನ ಮಿಶ್ರಣ ಮಾಡಿ ಅದಕ್ಕೆ ಸಿಂಚನ ಮಾಡಬೇಕು, ಅದನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸುತ್ತ ಹೋಗಬೇಕು, ಕೆಲಸಮಯದ ನಂತರ ಗುಲಗಂಜಿಯ ಮೊಳಕೆಗಳು ಏಳುವವು. ನೀವು ಯಾರ ಮೇಲೆ ಸ್ತಂಭನ ಪ್ರಯೋಗವನ್ನು ಮಾಡುವದಿದೆಯೋ, ಆ ಗುಲಗಂಜಿ ಮೊಳಕೆಗಳನ್ನು ಅಭಿಮಂತ್ರಿಸಿ ಅವರ ತಲೆಯ ಮೇಲೆ ಹಾಯಿಸಬೇಕು, ಆ ಮನುಷ್ಯನು ಆ ಹೊತ್ತಿನಲ್ಲಿ ಯಾವ ಸ್ಥಿತಿಯಲ್ಲಿರುವನೋ ಅದೇ ಸ್ಥಿತಿಯಲ್ಲಿ ಸ್ತಬ್ದನಾಗಿ ನಿಂತು ಬಿಡುವರು, ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಬುದ್ಧಿಸ್ತಂಭನ ಪ್ರಯೋಗ

ಅಪ್ಪುವಿನ ರಸ ಮತ್ತು ಬಿಳಿಸಾಸುವೆಗಳನ್ನು ಒಂದುಗೂಡಿಸಿ ಅದರ ಗಂಧವನ್ನು ಸಿದ್ಧಪಡಿಸಬೇಕು. ಅದರ ತಿಲಕವನ್ನು ಹಚ್ಚಿಕೊಳ್ಳಬೇಕು, ಅದರ ಮೇಲೆ ಯಾರ ದೃಷ್ಟಿ ಬೀಳುವದೋ ಅವರ ಬುದ್ಧಿ ಸ್ತಂಭನವಾಗುವದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

ಬೆಲ್ಲದ ರಸ ಮತ್ತು ಹೆಳ್ಳಿನ ತುದಿ ಇವು ಎರಡನ್ನು ಅರೆದು ಕಬ್ಬಿಣದ ಪಾತ್ರೆಯಲ್ಲಿರಿಸಬೇಕು, ಅದನ್ನು ಯಾರು ನೋಡುವರೋ ಅವರ ಬುದ್ಧಿಯು ಸ್ತಂಭಿತವಾಗುವದೆಂದು ತಿಳಿಯಬೇಕು.

## ಶತ್ರುಸ್ತಂಭನ ಪ್ರಯೋಗ

ರವಿವಾರ ದಿವಸ ಪುಷ್ಯನಕ್ಷತ್ರವಿರುವ ಯೋಗವನ್ನು ಹುಡುಕಿಕೊಳ್ಳಬೇಕು. ಅಂದು ಗೋಕರ್ಣಿ ಬೇರನ್ನು ತೆಗೆದುಕೊಂಡು ಬರಬೇಕು, ಅದನ್ನು

ಅಭಿಮಂತ್ರಿಸಿ ತಲೆಗೆ ಕಟ್ಟಿಕೊಳ್ಳಬೇಕು, ಆಗ ನಿಮ್ಮ ಎಂತಹ ಜಾಜ್ವಲ್ಯ ಶತ್ರುವೂ ಸಹ ಸ್ತಂಭಿತವಾಗುವದರಿಂದ ನಿಮಗೆ ಅವನಿಂದ ಯಾವ ತರದ ತೊಂದರೆಯೂ ಆಗುವದಿಲ್ಲವೆಂದು ತಿಳಿಯಬೇಕಲ್ಲದೇ ಅವನಿಂದ ನಿಮಗಾಗುತ್ತಿರುವ ತೊಂದರೆಗಳೆಲ್ಲ ಒಮ್ಮೆಲೇ ನಿಂತು ಹೋಗುವದು ಅತ್ಯಂತಖಾತ್ರಿ ಎಂದು ತಿಳಿದುಕೊಳ್ಳಿರಿ.

## ಪಶುಸ್ತಂಭನ ಪ್ರಯೋಗ

ಒಂಟಿಯ ಕೂದಲನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸಿ ಪ್ರಾಣಿಗಳ ಮೇಲೆ ಎಸೆದಲ್ಲಿ ಆ ಪ್ರಾಣಿಗಳ ಮುಂದೆ ನಡೆಯುವದೇ ಇಲ್ಲ, ಅವು ಇದ್ದಲ್ಲಿಯೇ ಸ್ತಂಭಿತಗೊಳ್ಳುವವೆಂದು ತಿಳಿಯಬೇಕು.

## ಪುರುಷಸ್ತಂಭನ ಪ್ರಯೋಗ

ಯಾವ ಪುರುಷನ ಮೇಲೆ ಈ ಸ್ತಂಭನ ಪ್ರಯೋಗವನ್ನು ಮಾಡುವದು ಇರುವದೋ ಅವನ ಹೆಸರನ್ನು ರಜಸ್ವಲೆಯಾದ ಸ್ತ್ರೀಯವಸ್ತ್ರದ ಮೇಲೆ ಗೋಪಿಚಂದನದಿಂದ ಬರೆಯಬೇಕು, ಅದನ್ನು ಒಂದು ಗಡಿಗೆಯಲ್ಲಿ ಹಾಕಿ ಮುಚ್ಚಿಡಬೇಕು, ಅಂದರೆ ಯಾರ ಹೆಸರನ್ನು ಬರೆದಿರುವಿರೋ ಆ ಪುರುಷನ ಸ್ತಂಭನವಾಗುವದೆಂದು ತಿಳಿದುಕೊಳ್ಳಬೇಕು

## ಗರ್ಭಸ್ತಂಭನ ಪ್ರಯೋಗ

ಋತುಕಾಲ ಮುಗಿದ ನಂತರ ಒಂದು ಔಡಲ ಬೀಜವನ್ನು ಅಭಿಮಂತ್ರಿಸಿ ನಂತರ ಅದರ ತಿಳಲನ್ನು ತಿಂದಲ್ಲಿ ಗರ್ಭವು ಸ್ಥಿರವಾಗಿ ನಿಲ್ಲುವದು ಗರ್ಭಪಾತವಾಗುವದಿಲ್ಲವೆಂದು ತಿಳಿದುಕೊಳ್ಳಬೇಕು.

ಆದಿತ್ಯವಾರ ಪುಷ್ಯನಕ್ಷತ್ರವಿರುವ ಯೋಗವನ್ನು ಸಾಧಿಸಿಕೊಂಡು ಕರಿಯ ಧತ್ತೂರಿ ಬೀಜವನ್ನು ತಂದು ಅದನ್ನು ಅಭಿಮಂತ್ರಿಸಿ ಗರ್ಭಿಣಿಯರ ಟೊಂಕಕ್ಕೆ ಕಟ್ಟಬೇಕು, ಅಂದರೆ ಗರ್ಭವು ಸ್ಥಿರವಾಗಿ ನಿಲ್ಲುವದು, ಗರ್ಭಪಾತವಾಗುವದಿಲ್ಲವೆಂಬುದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಬೆಳೆಸ್ತಂಭನ ಪ್ರಯೋಗ

ಸಾಸುವೆಯ ಹಾಲು ಅಥವಾ ಹತ್ತಿಕಾಳಿನ ಹಾಲಿನಲ್ಲಿ ಧಾನ್ಯವನ್ನು ನೆನೆ ಹಾಕಬೇಕು, ಆಗ ಆ ಬೆಳೆಗೆ ಯಾವ ರೀತಿಯಿಂದಲೂ ಅಗ್ನಿಭಯವು ಇಲ್ಲವೆಂದು ತಿಳಿಯಬೇಕು.

ಯಂತ್ರಗಳು

### ಗರ್ಭಸ್ತಂಭನ ಯಂತ್ರ

| | | |
|---|---|---|
| ಶ್ರೀ ರಾಮ ಗರ್ಭಧಾರಯ | ಶ್ರೀ ರಾಮ ಗರ್ಭಧಾರಯ | ಶ್ರೀ ರಾಮ ಗರ್ಭಧಾರಯ |
| ಶ್ರೀ ರಾಮ ಗರ್ಭಧಾರಯ | ಹೆಸರು | ಶ್ರೀ ರಾಮ ಗರ್ಭಧಾರಯ |
| ಶ್ರೀ ರಾಮ ಗರ್ಭಧಾರಯ | ಶ್ರೀ ರಾಮ ಗರ್ಭಧಾರಯ | ಶ್ರೀ ರಾಮ ಗರ್ಭಧಾರಯ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು ಅದನ್ನು ವಿಧ್ಯುಕ್ತವಾಗಿ ಪೂಜೆ ಮಾಡಬೇಕು ಒಂಬತ್ತು ನೂರು ದಾರದಿಂದ ಒಂಬತ್ತು ಸಲ ಅದನ್ನು ಸುತ್ತಬೇಕು, ನಂತರ ಅದನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು. ನಂತರ ಈ ಯಂತ್ರವನ್ನು ಕಟ್ಟಿಕೊಳ್ಳಬೇಕು, ಯಾವ ಸ್ತ್ರೀಯ ಗರ್ಭವು ಸ್ಥಿರವಾಗಿ ನಿಲ್ಲುವದಿಲ್ಲವೋ ಅವಳ ಈ ಯಂತ್ರವನ್ನು ಕೊರಳಲ್ಲಿ ಕಟ್ಟಿಕೊಳ್ಳಬೇಕು. ಪತಿ ಪತ್ನಿಯರಿಬ್ಬರೂ ಇಪ್ಪತ್ತೊಂದು ದಿವಸ ಸಹವಾಸ ತೊರೆಯಬೇಕು, ಸುಳ್ಳು ಹೇಳಬಾರದು, ಎರಡನೇಯವರ ಮನೆಯಲ್ಲಿ ಭೋಜನ ಮಾಡಬಾರದು, ಯಾರಿಗೂ ಮೋಸಮಾಡಬಾರದು, ಅತಿ ಸೌಮ್ಯವಾದ ಆಹಾರವನ್ನು ಸೇವಿಸಬೇಕು, ಶ್ರೀ ರಾಮನ ಚಿಂತನೆಯಲ್ಲಿ ತೊಡಗಬೇಕು, ಅದರಿಂದ ಗರ್ಭವು ಸ್ಥಿರವಾಗಿ ನಿಲ್ಲುವದಲ್ಲದೇ ಸುಂದರ ಶಿಶುವು ಜನಿಸುವದೆಂಬುದರಲ್ಲಿ ಯಾವದೇ ಸಂದೇಹವಿಲ್ಲ.

## ಇನ್ನೊಂದು ಯಂತ್ರ

| | | | |
|---|---|---|---|
| ೨೮ | ೨೫ | ೨ | ೭ |
| ೭ | ೩ | ೩೧ | ೬೨ |
| ೩೪ | ೩೭ | ೧ | ೧೦ |
| ೧೪ | ೨೯ | ೩೦ | ೬೩ |

ಯಾವ ಸ್ತ್ರೀಯ ಗರ್ಭವು ಸ್ಥಿರವಾಗಿ ನಿಲ್ಲುವದಿಲ್ಲವೋ ಆ ಸ್ತ್ರೀಯು ಈ ಯಂತ್ರವನ್ನು ಕಟ್ಟಿಕೊಳ್ಳಬೇಕು, ಕಾಗದದ ಮೇಲೆ ಬರೆದು ತಾಯಿತದಲ್ಲಿ ಸೇರಿಸಿ ಕಟ್ಟಿಕೊಳ್ಳಬೇಕು, ಕಟ್ಟಿಕೊಳ್ಳುವ ಮೊದಲು ವಿಧ್ಯುಕ್ತವಾಗಿ ಪೂಜಿಸಿ ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು ಈ ಯಂತ್ರವನ್ನು ಕಟ್ಟಿಕೊಳ್ಳುವದರಿಂದ ಗರ್ಭವು ಸ್ಥಿರವಾಗಿ ನಿಂತು ಯೋಗ್ಯ ಕಾಲದಲ್ಲಿಯೇ ಪ್ರಸೂತಿಯಾಗುವದೆಂಬಲ್ಲಿ ಸಂದೇಹವಿಲ್ಲ.

## ಮತ್ತೊಂದು ಯಂತ್ರ

| | | | |
|---|---|---|---|
| ೬೭ | ೫೩ | ೧ | ೧೪ |
| ೫ | ೨೫ | ೬೧ | ೫೧ |
| ೬೫ | ೮ | ೮೯ | ೧೧ |
| ೮ | ೮೩ | ೪೪ | ೮೫ |

ರವಿವಾರ ದಿವಸ ಈ ಯಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು. ಯಾವ ಸ್ತ್ರೀಯ ಗರ್ಭ ಸ್ಥಿರವಾಗಿ ನಿಲ್ಲುವದಿಲ್ಲವೋ ಅವಳ ಎಡಭುಜಕ್ಕೆ ಇದನ್ನು ಕಟ್ಟಬೇಕು ಕಟ್ಟುವ ಮೊದಲು ವಿಧ್ಯುಕ್ತವಾಗಿ ಪೂಜಿಸಿ ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು. ಆಗ ಅವಳ ಗರ್ಭವು ಅತ್ಯವಶ್ಯವಾಗಿ ಸ್ಥಿರವಾಗಿ ನಿಂತು ಸಕಾಲದಲ್ಲಿ ಮಾತ್ರ ಪ್ರಸೂತಿ ಆಗುವದೆಂಬಲ್ಲಿ ಸಂದೇಹವಿಲ್ಲ.

ಅಲ್ಲದೇ ರವಿವಾರ ದಿನವೇ ಕಾಗದದ ಮೇಲೆ ಈ ಯಂತ್ರವನ್ನು ಬರೆದು ವಿಧ್ಯುಕ್ತವಾಗಿ ಪೂಜಿಸಿ, ಸ್ತಂಭನ ಮಂತ್ರದಿಂದ ಅಭಿಮಂತ್ರಿಸಿ ತಾಯಿತದಲ್ಲಿ ಹಾಕಿ ಯಾವ ಸ್ತ್ರೀಯ ಗರ್ಭವು ನಿಲ್ಲುವದಿಲ್ಲವೋ ಅವಳು ಕೊರಳಲ್ಲಿ ಕಟ್ಟಿಕೊಳ್ಳಬೇಕು, ಅದರಿಂದ ಅವಳ ಗರ್ಭವು ಸ್ಥಿರವಾಗಿ ನಿಲ್ಲುವದರಲ್ಲಿ ಸಂದೇಹವೇ ಬೇಡ.

## ಇನ್ನೂ ಒಂದು ಯಂತ್ರ

| | | | |
|---|---|---|---|
| ಓಂ | ಓಂ | ಓಂ | ಓಂ |
| ಹ್ರಿಂ | ಹ್ರಿಂ | ಹ್ರಿಂ | ಹ್ರಿಂ |
| ಹ್ರಿಂ | ಹ್ರಿಂ | ಹ್ರಿಂ | ಹ್ರಿಂ |
| ಓಂ | ಓಂ | ಓಂ | ಓಂ |

ರವಿವಾರ ದಿವಸ ಮೂಲಾ ನಕ್ಷತ್ರ ಇರಬೇಕು, ಅಂತಹ ದಿನವೊಂದು ಹುಡುಕಿ ತೆಗೆಯಬೇಕು, ಭೋಜ ಪತ್ರದ ಮೇಲೆ ಅಷ್ಟಗಂಧದಿಂದ ಈ ಯಂತ್ರವನ್ನು ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು. ಯಾವ ಸ್ತ್ರೀಯ ಗರ್ಭವು ಸ್ಥಿರವಾಗಿ ನಿಲ್ಲುವದಿಲ್ಲವೋ ಅವಳು ಇದನ್ನು ಭುಜಕ್ಕೆ ಕಟ್ಟಿಕೊಳ್ಳಬೇಕು, ಅವಳ ಗರ್ಭವು ನಿಂತು ಪುತ್ರವರ್ತಿಯಾಗುವದರಲ್ಲಿ ಯಾವ ರೀತಿಯಿಂದಲೂ ಸಂದೇಹವಿಲ್ಲ.

## ಶತ್ರು ಸ್ಥಂಭನ ಯಂತ್ರ

| ಹೆಸರು — ಸ್ತಂಭನ |
|---|
| ಓಂ ಹ್ರಿಂ ಏಂ ಕ್ಲೀಂ |

ಕಬ್ಬಿಣದ ಲೇಕ್ಕಣಿಕೆಯಿಂದ ಬಾರುಸಿನ ರಸದಿಂದ ಈ ಯಂತ್ರವನ್ನು ಬರೆಯಬೇಕು, ದೀಪಾವಳಿಯ ದಿನದ ಅರ್ಧ ರಾತ್ರಿಯ ಕಾಲಕ್ಕೆ ಈ ಯಂತ್ರದ ಸಿದ್ಧಿಯನ್ನು ಪಡೆಯಬೇಕು, ಈ ಯಂತ್ರವು ಯಾರ ದೃಷ್ಟಿಗೆ ಬೀಳುವದೋ ಅವರ ಸ್ತಂಬನವಾಗುವದು. ಅಂದರೆ ಅವರು ಕದಲದೇ ಸ್ಥಿರವಾಗಿ ನಿಲ್ಲುವರು, ಹೀಗೆ ಈ ಯಂತ್ರದಿಂದ

ಶತ್ರು ಸ್ತಂಭನವೂ ಅತ್ಯಂತ ಉತ್ತಮ ರೀತಿಯಲ್ಲಿ ಆಗುವದೆಂಬುವದರಲ್ಲಿ ಸಂದೇಹವಿಲ್ಲ

## ವೀರ್ಯ ಸ್ತಂಭನ ಯಂತ್ರ

| | | | |
|---|---|---|---|
| ೨೩ | ೨೧ | ೩ | ೮ |
| ೨ | ೫ | ೬೩ | ೨೫ |
| ೨೦ | ೨೫ | ೯ | ೧ |
| ೪ | ೬ | ೨೪ | ೨೨ |

ಬಿಳಿಯ ಕಾಗದದ ಮೇಲೆ ಈ ಯಂತ್ರವನ್ನು ಕಪ್ಪು ಮಸಿಯಿಂದ ಬರೆಯಬೇಕು. ಅದನ್ನು ಸ್ತಂಭನ ಮೂಲಮಂತ್ರದಿಂದ ಅಭಿಮಂತ್ರಿಸಬೇಕು, ಈ ಯಂತ್ರವನ್ನು ತಾಯಿತದಲ್ಲಿ ಹಾಕಿ ಕೊರಳಲ್ಲಿ ಕಟ್ಟಿಕೊಂಡು ರತಿಕ್ರೀಡೆಯಲ್ಲಿ ನಿರತರಾಗಬೇಕು. ಆ ಸಮಯದಲ್ಲಿ ವೀರ್ಯವು ಶೀವ್ರವಾಗಿ ಸ್ಖಲನ ಹೊಂದದೇ ಕೆಲಹೊತ್ತು ಸ್ಥಿರವಾಗಿ ನಿಲ್ಲುವದು. ಇದರಿಂದ ವಿಷಯ ಸುಖವು ನಿಮಗೆ ಮನಸ್ಸಿನಂತೆ ದೊರೆತು ಬಹಳಷ್ಟು ಸುಖವೆನಿಸುವದಲ್ಲದೇ ಆನಂದವಾಗುವಲ್ಲಿಯೂ ಸಂದೇಹವಿಲ್ಲ.

## ವಾಣಿಸ್ತಂಭನ ಯಂತ್ರ

| | | |
|---|---|---|
| ಲ್ರಂ | ಲ್ರಂ | ಲ್ರಂ |
| ಲ್ರಂ | ಹೆಸರು | ಲ್ರಂ |
| ಲ್ರಂ | ಲ್ರಂ | ಲ್ರಂ |

ಕೆಂಪು ಮಸಿಯಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಯಾರ ವಾಣಿಯನ್ನು ಸ್ತಂಭನಗೊಳಿಸಬೇಕಾಗಿದೆಯೋ ಅವರ ಹೆಸರನ್ನು ಬರೆಯಬೇಕು. ನಂತರ ಯಂತ್ರವನ್ನು ಸ್ತಂಭನ ಮಂತ್ರದಿಂದ ಅಭಿಮಂತ್ರಿಸಬೇಕು. ಅಂದರೆ ಅವನ ವಾಣಿಯು ಸ್ತಂಭನಗೊಳ್ಳುವದು ಖಾತ್ರಿ ಎಂದು ತಿಳಿಯಬೇಕು,

# ಮೋಹನ ಕರ್ಮ ಸಾಧನೆಯು

ಮೋಹನ ಕರ್ಮವೆಂದರೆ ಎರಡನೆಯವರನ್ನು ಮೋಹಿತಗೊಳಿಸಿ ಸಾಧಕರ ವಶದಲ್ಲಿ ಕೊಡುವ ಸಾಧನೆಯಾಗಿರುವದು. ಇದು ತೀವ್ರವಾಗಿ ಫಲ ಕೊಡುವಂತಹದಾಗಿರುವದು. ಮೋಹನ ಕರ್ಮ ಪ್ರಯೋಗದಿಂದ ಪ್ರೇಮವು ವರ್ಧಿಸುವದೆಂಬುದನ್ನು ತಿಳಿದುಕೊಳ್ಳಬೇಕು. ಆದರೆ ಸಾಧಕರು ಬಹು ತಾಳ್ಮೆಯಿಂದ ಮತ್ತು ಸಂಯಮದಿಂದ ಮಾತ್ರ ವರ್ತಿಸುವದು ಅವಶ್ಯವೆಂಬುದನ್ನು ಅಗತ್ಯವಾಗಿರುವದೆಂಬುದನ್ನು ಮರೆಯಬಾರದು. ಇದರಲ್ಲಿ ಮೂರು ಬೀಜ ಮಂತ್ರಗಳಿದ್ದು ಅವುಗಳಲ್ಲಿ ಯಾವದೇ ಒಂದು ಮಂತ್ರವನ್ನು ಒಂದುವರಿಲಕ್ಷಸಲ ಜಪಿಸಬೇಕು. ಆದರಿಂದ ಮಂತ್ರದ ಸಿದ್ಧಿಯಾಗುವದು. ನಂತರ ಪ್ರಯೋಗ ಕಾಲವಲ್ಲಿ ಪ್ರತ್ಯೇಕವಾಗಿರುವ ಮಂತಗಳನ್ನು ೧೦೮ ಸಲ ಜಪಿಸಬೇಕು. ವಿಧಿಪೂರ್ವಕವಾಗಿ ಇವೆಲ್ಲವನು ಕೈಕೊಂಡಲ್ಲಿ ಎಲ್ಲದರಲ್ಲಿಯೂ ಸಂಪೂರ್ಣ ಸಿದ್ಧಿಯು ದೊರಕುವದು. ಈ ಮೂರು ಬೀಜಮಂತ್ರಗಳು ಈ ರೀತಿಯಾಗಿರುವವು. ಅ) ಓಂ ನಮೋ ಭಗವತೆ ರುದ್ರಾಯ ಸರ್ವಜಗ ಮೋಹನಂ ಕುರು ಕುರು ಸ್ವಾಹಾ ಆ) ಓಂ ರಕ್ತ ಚಾಮುಂಡೆ ಸರ್ವ ಜನಾನ್ ಮೋಹಾಯ, ಮೋಹಾಯ ಮಮ ವಶ್ಯಂ ಕುರು ಕುರು ಸ್ವಾಹಾ। ಇ) ಓಂ ಉಡ್ಡಾಮರೇಶ್ವರಾಯ ಸರ್ವ ಜಗ ಮೋಹನಾಯ ಅಂ ಆಂ ಇಂ ಈಂ ಉಂ ಊಂ ಋಂ ೠಂ ಹ್ರೂಂ ಫಟ್ ಸ್ವಾಹಾ।

ಮಂತ್ರಗಳು

### ರಾಜಾಮೋಹನ ಮಂತ್ರ

ಓಂ ಶ್ರೀಂ ಹ್ರೀಂ ಕ್ಲೀಂ ನಮೋ ಕುರುಮ ಸುಭಗೆ

(ಹೆಸರು) ಸ್ಯ ಭೀತಮ್ ದಹದಹ ಹನಹನ ಪಚಪ ಸ್ವಾಹಾ। ಚ

ಉತ್ತರಾಭಿಮುಖವಾಗಿ ಕುಳಿತುಕೊಂಡು ಈ ಮಂತ್ರವನ್ನು ಜಪಿಸಬೇಕು. ಇಪ್ಪತ್ತೊಂದು ದಿನಗಳ ವರೆಗೆ ದಿನಾಲು ಒಂದೂಕಾಲು ಲಕ್ಷಸಲ

ಈ ಮಂತ್ರವನ್ನು ಜಪಿಸಬೇಕು. ಹಿಂದರೆ ಮಂತ್ರದ ಸಿದ್ಧಿಯಾಗುವದು. ನೀವು ಇಚ್ಛಿಸಿದ ರಾಜನು ಮೋಹಿತನಾಗುವನು. ನಿಮ್ಮ ಮೇಲೆ ಪೂರ್ಣ ಕೃಪೆಯಾಗುವದೆಂಬಲ್ಲಿ ಸಂದೇಹವಿಲ್ಲ.

## ಪತಿಮೋಹನ ಮಂತ್ರ

ಓಂ ಅಸ್ಯ ಶ್ರೀ ಸುರಿ ಮಂತ್ರಸ್ಯಾರ್ಥವರ್ಣ
ಋಷಿ ಇತಿ ಶಿಪಿಷ ಸ್ವಾಹಾ॥

ಸ್ತ್ರೀಯು (ಪತ್ನಿ) ಒಂದು ಶುಭಮುಹೂರ್ತದಲ್ಲಿ ವೃತವನ್ನು ಪ್ರಾರಂಭಿಸಬೇಕು. ವೃತದ ಕಾಲದಲ್ಲಿ ಈ ಮೇಲೆ ಹೇಳಿರುವ ಮಂತ್ರ ವನ್ನು ೧೧೮ ಸಲ ಜಪಿಸಬೇಕು. ನಿಯಮಿತವಾಗಿ ತಪ್ಪದೇ ಜಪಿಸಬೇಕ ಲ್ಲದೇ ಮಂತ್ರ ಜಪಿಸುವ ಕಾಲಕ್ಕೆ ಪದ್ಮಾಸನವನ್ನು ಹಾಕಿಕೊಂಡಿರಬೇಕು ಹೀಗೆ ೧೧೮ ದಿನಗಳ ವರೆಗೆ ಜಪಿಸಿದ ನಂತರ ಸಿದ್ಧಿಯು ದೊರೆಯುವದು. ಅವಳಿಗೆ ಪತಿ ಸುಖ ದೊರೆತು ಅವಳ ಜೀವನವು ಅತ್ಯಂತ ಸುಖಮಯವಾಗು ವದರಲ್ಲಿ ಸಂದೇಹವಿಲ್ಲ.

## ಇನ್ನೊಂದು ಮಂತ್ರ

ರಕ್ತಾಂಬರ ಪರಿಚ್ಛಿನ್ನ ರಕ್ತಮಣಿ ವಿಭೂಷಿತಾಮ್
ಗುಂಜಾಹಾರ ಸಮಾಯುಕ್ತಾ ಷೋಡಶಾಬ್ದೀನ ಯುಕ್ತತಾ॥

ಪತಿ ತನ್ನ ವಶದಲ್ಲಿರಬೇಕೆಂದು ಯಾವ ಸ್ತ್ರೀಯು ಬಯಸುವಳೋ ಅವಳು ಪ್ರತಿದಿವಸ ಮೂರು ಗಂಟೆಗಳ ವರೆಗೆ ಈ ಮಂತ್ರವನ್ನು ಜಪಿಸ ಬೇಕು. ಮೂವತ್ತು ದಿನಗಳ ವರೆಗೆ ಈ ರೀತಿ ಜಪವನ್ನು ಮಾಡಿದನಂತರ ಸಿದ್ಧಿಯಾಗಿ ಪತಿಯು ಆ ಸ್ತ್ರೀಯ ಬಗ್ಗೆ ಮೋಹಿತನಾಗಿ ಜೀವನಾದ್ಯಂತ ವಾಗಿ ಪತ್ನಿಯ ವಶದಲ್ಲಿ ಉಳಿಯುವನೆಂದು ತಿಳಿಯಬೇಕು. ಇದರಿಂದ ಅವಳ ಜೀವನವು ಸುಖಪ್ರದವಾಗುವದು.

## ಸ್ತ್ರೀ ಮೋಹನ ಮಂತ್ರ

ಓಂ ನಮೋ ಭಗವತೆ ರುದ್ರಾಯ (ಹೆಸರು) ಮೋಹಯ ಕುರು ಕುರು ಸ್ವಾಹಾ||

ಮಧ್ಯರಾತ್ರಿಯ ಕಾಲದಲ್ಲಿ ಸ್ಮಶಾನಕ್ಕೆ ನಿರ್ಭೀತರಾಗಿ ಹೋಗಬೇಕು. ಅಲ್ಲಿ ಪಿಂಪಳ ಗಿಡದ ಕೆಳಗೆ ಸಿದ್ಧಾಸನವನ್ನು ಹಾಕಿಕೊಂಡು ಕುಳಿತು ಈ ಮಂತ್ರವನ್ನು ಒಂದೂಕಾಲು ವೇಳೆ ಜಪಿಸಬೇಕು. ನಲವತ್ತೆರಡು ದಿವಸಗಳ ವರೆಗೆ ಜಪಿಸಿದ ನಂತರ ಸಿದ್ಧಿಯು ದೊರೆಯುವದು. ನಂತರ ಯಾವ ಸ್ತ್ರೀಯನ್ನು ಇಚ್ಛಿಸುವಿರೋ ಅವಳು ಮೋಹಿತಳಾಗಿ ನಿಮ್ಮ ಬಳಿಗೆ ಬರುವಳೆಂಬಲ್ಲಿ ಸ್ವಲ್ಪ ಸಹ ಸಂಶಯಪಡಬೇಕಾಗಿಲ್ಲ.

## ಬಂಧುಮೋಹನ ಮಂತ್ರ

ವಿನೋನ ತಪಯೋಗ ಸಂರಕ್ತಾ ಸತೋಪವಿಷ್ಟಾಂಗ
ರಕ್ತ ಚಂದನ ಲಿಪ್ತಾಂಗಾ ಭಕ್ತಾನಾಂಚ ಶುಭಪ್ರದಮ್

ಆಕಳ ಸೆಗಣಿಯಿಂದ ನೆಲವನ್ನು ಸಾರಿಸಿ ಶುದ್ಧಗೊಳಿಸಬೇಕು. ಈ ಸ್ವಚ್ಛವಾದ ಸ್ಥಳದ ಮೇಲೆ ಒಂದು ತ್ರಿಕೋನವನ್ನು ನಿರ್ಮಿಸಬೇಕು. ಅದರ ಮೇಲೆ ಕೆಂಪು ಲೋಹದ ಲೇಪವನ್ನು ಮಾಡಬೇಕು. ಈ ತ್ರಿಕೋಣದಲ್ಲಿ ನೀವು ಮೋಹಿತಗೊಳಿಸಬೇಕಾದ ಬಂಧುವಿನ ಹೆಸರನ್ನು ಬರೆಯಬೇಕು. ಈ ತ್ರಿಕೋಣದ ಮೇಲೆ ಆಸನ ಹಾಕಿ ಅದರ ಮೇಲೆ ಪದ್ಮಾಸನವನ್ನು ಹಾಕಿಕೊಂಡು ಕುಳಿತುಕೊಳ್ಳಬೇಕು. ಈ ಮೇಲೆ ತಿಳಿಸಿರುವ ಮಂತ್ರದಿಂದ ಹವನವನ್ನು ಮಾಡಲಾರಂಭಿಸಬೇಕು. ಹೀಗೆ ಇಪ್ಪತ್ತೊಂದು ದಿನಗಳವರೆಗೆ ಮಾಡಿದ ನಂತರ ಈ ಯಂತ್ರದ ಸಿದ್ಧಿಯು ಪ್ರಾಪ್ತವಾಗುವದು. ಆಗ ನಿಮ್ಮ ಬಂಧುವು ನಿಮ್ಮ ಮೇಲೆ ವೈರ ತಳೆದಿದ್ದರೆ ಅದನ್ನು ತೊರೆಯುವನಲ್ಲದೆ ನಿಮ್ಮ ಬಗ್ಗೆ ಪ್ರೇಮದ ಭಾವನೆಯನ್ನು ತಳೆಯುವನು. ಅಲ್ಲದೇ ನಿಮ್ಮ ಆಜ್ಞೆಯನ್ನು ಸಹ ಪಾಲಿಸ ತೊಡಗುವನೆಂಬುದು ಖಾತ್ರಿ ಎಂದು ತಿಳಿಯಿರಿ.

## ಶತ್ರುಮೋಹನ ಮಂತ್ರ

ಓಂ ವಾನ ರುದ್ರಾಯಿಮುಖಿ ಶ್ವೇತದಾಯಿ ಪಟ್ಟಿಕಾ ಕಾಂಚಿನಿ
ಓಲಂಬಿನಿ ದ್ರವ ದ್ರವ ಓಂ ಥಂ ಥಂ ವಂ ವಂ ಓಂ ಠಃ ಠಃ

ಆದಿತ್ಯವಾರ ಇಲ್ಲವೇ ಮಂಗಳವಾರ ದಿನದಂದು ಶತ್ರುವಿನ ಎಡಗಾಲಿನ ಧೂಳಿಯನ್ನು ತೆಗೆದುಕೊಂಡು ಬಂದು ಒಂದು ಗೊಂಬೆಯನ್ನು ಸಿದ್ಧಪಡಿಸಬೇಕು. ಈ ಗೊಂಬೆಯ ಮೇಲೆ ಕರಿಯ ವಸ್ತ್ರದ ಮುಸುಕನ್ನು ಹಾಕಿ ಅದರ ಮೇಲೆ ನೀವು ಯಾವ ಶತ್ರುವನ್ನು ಮೋಹಿತಗೊಳಿಸಬೇಕೆಂದಿರುವಿರೋ ಅವರ ಹೆಸರನ್ನು ಬರೆಯ-ಬೇಕು. ಈ ಗೊಂಬೆಯನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ನಂತರ ವ್ಯಾಘ್ರಚರ್ಮದ ಮೇಲೆ ಕುಳಿತುಕೊಂಡು ಸ್ಫಟಿಕ ಮಣಿಯಿಂದ ಸಿದ್ಧಪಡಿಸಿದ ಜಪಮಾಲೆಯಿಂದ ಈ ಮೇಲೆ ಹೇಳಿರುವ ಮಂತ್ರವನ್ನು ಜಪಿಸಬೇಕು. ಆಗ ನಿಮ್ಮ ಶತ್ರುವು ನಿಮ್ಮ ಮೇಲಿನ ವೈರವನ್ನು ತೋರಿಯುವನಲ್ಲದೇ, ನಿಮ್ಮ ಸ್ನೇಹವನ್ನು ಸಂಪಾದಿಸಿಕೊಳ್ಳಲು ಅತ್ಯಾತುರವನ್ನು ವ್ಯಕ್ತಪಡಿಸುವದು ನಿಮಗೆ ಕಂಡು ಬರುವದು. ಇದು ಅತಿ ಖಾತ್ರಿ ಎಂದು ತಿಳಿದುಕೊಳ್ಳಿರಿ.

## ಮಹಾಮೋಹನ ಮಂತ್ರ

ಓಂ ಭ್ರಿಂ ಘುಂ ಘುಂ ಠಃ ಠಃ

ಪ್ರತಿಪದೆಯ ದಿವಸ ಚಿಂಚಿಕಾ ಪಕ್ಷಿಯ ರೆಕ್ಕೆಯನ್ನು ತಂದು ಅದನ್ನು ಕಸ್ತೂರಿಯಲ್ಲಿ ಸೇರಿಸಿ ಅದರ ಗಂಧವನ್ನು ತಯಾರಿಸಬೇಕು. ಈ ಗಂಧವನ್ನು ಮೇಲೆ ಹೇಳಿರುವ ಮಂತ್ರದಿಂದ ಅಭಿಮಂತ್ರಿಸಿ ಅದರ ತಿಲಕವನ್ನು ಹಚ್ಚಿಕೊಳ್ಳಬೇಕು. ಈ ತಿಲಕವನ್ನು ನೀವು ಹಚ್ಚಿಕೊಂಡಲ್ಲಿ ನಿಮ್ಮನ್ನು ಯಾರಾದರೂ ನೋಡಿದ ಕ್ಷಣದಲ್ಲಿ ನಿಮ್ಮ ಬಗ್ಗೆ ಮೋಹಿತರಾಗುವರೆಂಬುದರಲ್ಲಿ ಸಂದೇಹವಿಲ್ಲ.

## ವಿಶ್ವಮೋಹನ ಪ್ರಯೋಗ

ಆದಿತ್ಯವಾರ ದಿವಸ ಬೆಲ್ಲದ ರಸದಲ್ಲಿ ತುಳಸಿ ಬೀಜಗಳನ್ನು ಹಾಕಿ ಗಂಧವನ್ನು ತಯಾರಿಸಬೇಕು. ಆ ಗಂಧವನ್ನು ಅಭಿಮಂತ್ರಿಸಿ ಅದರತಿಲಕ ವನ್ನು ಹಚ್ಚಿಕೊಳ್ಳಬೇಕು, ಅದರಿಂದ ಸರ್ವಜಗವು ಮೋಹಿತವಾಗುವದು

ಬಾಳೆಹಣ್ಣಿನ ರಸದಲ್ಲಿ ಅರಿಷಣ, ಅಷ್ಟಗಂಧ ಮತ್ತು ಗೋಪಿಚಂದನ ಗಳನ್ನು ಸೇರಿಸಿ ಅದರ ಗಂಧವನ್ನು ತಯಾರಿಸಬೇಕು. ಈ ಗಂಧವನ್ನು ಅಭಿಮಂತ್ರಿಸಿ ಅದರ ತಿಲಕವನ್ನು ಹಚ್ಚಿಕೊಳ್ಳಬೇಕು. ಅದರಿಂದ ದರ್ಶನ ಮಾತ್ರದಲ್ಲಿ ಸರ್ವರೂ ಮೋಹಿತರಾಗುವರೆಂಬುದರಲ್ಲಿ ಸಂದೇಹವೇನೂಇಲ್ಲ.

ಬಾಳೆಹಣ್ಣಿನ ರಸದಲ್ಲಿ ಮನಶೀಳ ಬೇರು ಮತ್ತು ಕರ್ಪೂರವನ್ನುಸೇರಿಸಿ ಅದರ ಗಂಧವನ್ನು ಸಿದ್ಧಪಡಿಸಬೇಕು. ಯಾವ ಸಾಧಕನು ಈ ಗಂಧದ ತಿಲಕವನ್ನು ಧರಿಸುವನೋ ಅವನ ದರ್ಶನ ಮಾತ್ರದಿಂದಲೇ ಸರ್ವರೂ ಮೋಹಿತರಾಗುವದೆಂಬದರಲ್ಲಿ ಸಂಶಯವಿಲ್ಲ

ಬಿಳಿಯ ದರ್ಭೆ ಮತ್ತು ಅರಿಷಣವನ್ನು ಸೇರಿಸಿ ಗಂಧವನ್ನು ಸಿದ್ಧ ಪಡಿಸಬೇಕು. ಅದರ ತಿಲಕವನ್ನು ಹಚ್ಚಿಕೊಳ್ಳಬೇಕು. ಅದರಿಂದ ಸರ್ವವೂ ನಿಮ್ಮ ವಶದಲ್ಲಿ ಬರುವದೆಂದು ತಿಳಿಯಬೇಕು.

ಬಿಲಪತ್ರಿ ಕಾಯಿಯನ್ನು ತಂದು ಅದನ್ನು ಕುಟ್ಟಿ ಚೂರ್ಣ ಮಾಡ ಬೇಕು. ಅದನ್ನು ಕರಿಆಕಳ ಹಾಲಿನಲ್ಲಿ ಸೇರಿಸಿ ಅದರ ಗುಳಿಗೆಗಳನ್ನು ಸಿದ್ದಪಡಿಸಬೇಕು. ಈ ಗುಳಿಗೆಗಳನ್ನು ಹಿಂದಿನಿಂದ ತೋಯಿಸಿ ಅದರ ತಿಲಕವನ್ನು ಹಚ್ಚಿಕೊಳ್ಳಬೇಕು. ಸರ್ವಸ್ವವೂ ನಿಮಗೆ ಮೋಹಿತಹೊಂದುವ ದೆಂದು ತಿಳಿಯಬೇಕು.

ಭಾಂಗ ಮತ್ತು ಬಿಳಿ ಸಾಸ್ವಿಯನ್ನು ಸೇರಿಸಿ ಲೇಪ ಮಾಡಿಕೊಂಡ್ನು ಶರೀರದ ಮೇಲೆಲ್ಲ ಲೇಪಿಸಿಕೊಳ್ಳಬೇಕು. ಅದರಿಂದ ಸರ್ವರೂ ನಿಮ್ಮ ಬಗ್ಗೆ ಮೋಹಿತರಾಗುವದು ಖಾತ್ರಿ ಎಂದು ತಿಳಿಯಬೇಕು.

ಬಿಳಿಚಂದನ ಹಾಗೂ ಬಿಳಿ ಹತ್ತಿ ಕಾಳುಗಳನ್ನು ಸೇರಿಸಿ ಅದರ ಲೇಪನವನ್ನು ಸಿದ್ಧ ಪಡಿಸಬೇಕು. ಈ ಲೇಪನವನ್ನು ಶರೀರದ ಮೇಲೆ ಲೇಪಿಸಿಕೊಳ್ಳಬೇಕು. ಆಗ ಸರ್ವರೂ ನಿಮ್ಮ ಬಗ್ಗೆ ಮೋಹ ತಾಳಿ ಬರುವದೆಂಬದರಲ್ಲಿ ಯಾವ ಸಂಶಯವೂ ಇಲ್ಲವೆಂದು ತಿಳಿಯಿರಿ.

ತುಳಸಿ ಎಲೆಗಳನ್ನು ಮರೆಮಾಡಿಕೊಂಡು ತರಬೇಕು, ಅದರಲ್ಲಿ ತಂಬಾಕದ ಪುಡಿ ಮತ್ತು ಅಫುವನ್ನು ಸೇರಿಸಿ ನಾಲ್ಕು ನಾಲ್ಕು ಮಾಸಿಗಳ ಗುಳಿಗೆಗಳನ್ನು ಸಿದ್ಧ ಪಡಿಸಬೇಕು. ಪ್ರತಿದಿನ ಸಾಯಂಕಾಲ ಕರಿಆಕಳ ಹಾಲಿನಲ್ಲಿ ಅದನ್ನು ಸೇರಿಸಿ ಸೇವಿಸಬೇಕು, ಅಂದರೆ ನಿಮ್ಮಲ್ಲಿ ವಿಶ್ವಮೋಹನ ಶಕ್ತಿಯು ಪ್ರಾಪ್ತವಾಗುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ರಾಜಮೋಹನ ಪ್ರಯೋಗ

ಬೆಲಪತ್ರಿಯ ಎಲೆಯನ್ನು ಕರಿಆಕಳಹಾಲಿನಲ್ಲಿ ಸೇರಿಸಿ ಅದರ ಗಂಧವನ್ನು ಸಿದ್ಧ ಪಡಿಸಬೇಕು, ಈ ಗಂಧದ ತಿಲಕವನ್ನು ಹಚ್ಚಿಕೊಂಡು ರಾಜದರ್ಬಾರಕ್ಕೆ ಹೋಗಬೇಕು, ಈಗ ಯಾವದಾದರೂ ಸರಕಾರಿ ಅಧಿಕಾರಿಗಳ ಬಳಿಗೆ ಹೋದರೂ ಅವರು ನಿಮ್ಮ ಬಗ್ಗೆ ಮೋಹಿತರಾಗಿ ನಿಮ್ಮನ್ನು ಸನ್ಮಾನಿಸುವರಲ್ಲದೇ ನಿಮ್ಮ ಕಾರ್ಯವು ಸುಲಭವಾಗಿ ಕೈಗೂಡುವದರಲ್ಲಿ ಸಂದೇಹವಿಲ್ಲ

## ಪತಿಮೋಹನ ಪ್ರಯೋಗ

ಬೆಲ್ಲದ ರಸದಲ್ಲಿ ತುಳಸಿಬೀಜವನ್ನು ಸೇರಿಸಿ ಲೇಪವನ್ನು ಸಿದ್ಧಪಡಿಸಿಕೊಳ್ಳಬೇಕು. ಆದಿತ್ಯವಾರ ದಿವಸ ಈ ಲೇಪವನ್ನು ಸ್ತ್ರೀಯು ತನ್ನ ಯೋನಿಗೆ ಲೇಪಿಸಿಕೊಂಡು ಪತಿಸಮಾಗಮವನ್ನು ಮಾಡಿದರೆ ಪತಿಯು ಆ ಸ್ತ್ರೀಯ ಬಗ್ಗೆ ಮೋಹಿತನಾಗಿ ಉಳಿಯುವನು, ಅವನ ಎರಡನೇ ಸ್ತ್ರೀಯ ಕಡೆಗೆಂದೂ ಕಣ್ಣೆತ್ತಿ ನೋಡುವದಿಲ್ಲ.

ತುಳಸಿಎಲೆ, ಅಶ್ವಗಂಧ ಮತ್ತು ಭಾಂಗವನ್ನು ಸೇರಿಸಿ ಮಿಶ್ರಣ ಸಿದ್ಧಪಡಿಸಬೇಕು, ಅದರಿಂದ ನಾಲ್ಕು ನಾಲ್ಕು ಮಾಸಿ ತೂಕದ ಗುಳಿಗೆಗಳನ್ನು

ಸಿದ್ಧಪಡಿಸಬೇಕು, ಪ್ರತಿದಿನ ಸಾಯಂಕಾಲ ಒಂದು ಗುಳಿಗೆಯನ್ನು ಕಪ್ಪು ಆಕಳದ ಹಾಲಿನಲ್ಲಿ ತೆಗೆದುಕೊಳ್ಳಬೇಕು, ಯಾವ ಸ್ತ್ರೀಯು ಹೀಗೆ ಮಾಡುವಳೋ ಅವಳ ಪತಿಯು ಅವಳ ಬಗೆಗೆ ಮೋಹಿತನಾಗಿ ಅವಳ ವಶವಲ್ಲಿಯೇ ಉಳಿಯುವನೆಂಬದು ಖಾತ್ರಿ ಎಂದು ತಿಳಿಯಿರಿ.

## ಸ್ತ್ರೀ ಮೋಹನ ಪ್ರಯೋಗ

ಉದ್ದುದ್ದ ಕಟ್ಟಿಗೆಗಳನ್ನು ತೆಗೆದುಕೊಂಡು ಬಂದು ನೆಲದ ಮೇಲೆ ಅವುಗಳಿಂದ ಒಂದು ಗಣಪತಿಯ ಚಿತ್ರವನ್ನು ಸಿದ್ಧಪಡಿಸಬೇಕು, ಯಾವ ಸ್ತ್ರೀಯನ್ನು ಮೋಹಿತಗೊಳ್ಳಿಸಬೇಕೆಂಬ ಇಚ್ಛೆಯಿರುವದೋ ಅವಳ ಹೆಸರನ್ನು ತೆಗೆದುಕೊಳ್ಳುತ್ತ ಈ ಗಣಪತಿಯ ಮುಂದೆ ಕೂಡ್ರಬೇಕು, ಮತ್ತು ಚಂದನದಿಂದ ಆಹುತಿ ಕೊಡಬೇಕು, ಅಂದರೆ ಇಚ್ಛಿತ ಸ್ತ್ರೀಯು ಮೋಹಿತಳಾಗಿ ನಿಮ್ಮ ಬಳಿಗೆ ಬರುವದರಲ್ಲಿ ಸಂದೇಹವಿಲ್ಲ.

ಭಂಗಿಎಲೆ, ಬಿಳಿಸಾಸ್ವಿ ಮತ್ತು ತುಪ್ಪಗಳನ್ನು ಸೇರಿಸಿ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು, ಅದನ್ನು ಮೈಗೆ ಲೇಪಿಸಿಕೊಳ್ಳಬೇಕು, ಯಾವ ಸ್ತ್ರೀಯನ್ನು ಮೋಹಿತಗೊಳಿಸಬೇಕೆಂದು ಮನಸ್ಸು ಇರುವದೋ ಅವಳ ಸಮ್ಮುಖದಲ್ಲಿ ಹೋಗಬೇಕು, ಅಂದರೆ ಆ ಸ್ತ್ರೀಯು ನಿಮ್ಮ ಬಗ್ಗೆ ಮೋಹಿತಳಾಗಿ ನಿಮ್ಮ ಬಳಿಗೆ ಬರುವಳೆಂಬುದು ಖಾತ್ರಿ ಎಂದು ತಿಳಿಯಿರಿ.

## ಶತ್ರು ಮೋಹನ ಪ್ರಯೋಗ

ಚಂದನದಿಂದ ಭೋಜಪತ್ರದ ಮೇಲೆ ಯಾವ ಶತ್ರುವನ್ನು ಮೋಹಿತಗೊಳಿಸಬೇಕಾಗಿರುವದೋ ಅವರ ಹೆಸರನ್ನು ಬರೆಯಿರಿ, ಅದನ್ನು ಜೇನು ತುಪ್ಪದಲ್ಲಿ ಮುಳುಗಿಸಿ ಇಡಿರಿ, ಆಗ ಆ ಶತ್ರುವು ಮೋಹಿತನಾಗುವನಲ್ಲದೇ ನಿಮ್ಮೊಂದಿಗೆ ಸ್ನೇಹ ಮಾಡಿಕೊಳ್ಳಲು ಹಪಾಹಿಸುವನೆಂಬದು ಖಾತ್ರಿ ಎಂದು ಭಾವಿಸಿರಿ.

## ಪಶುಪಕ್ಷಿ ಮೋಹನ ಪ್ರಯೋಗ

ಚಂದನ ಹಾಗೂ ಸಿಂಗಡಿಕಾಯಿ, ಮುರಗಿಕಾಯಿ, ಹಿಪ್ಪಲಿ ಇವುಗಳನ್ನೆಲ್ಲ ಸೇರಿಸಿ ಅದರ ಧೂಪವನ್ನು ಸಿದ್ಧಪಡಿಸಬೇಕು, ಈ ಧೂಪದ ಹೊಗೆ ಹಾಕಬೇಕು, ಅದರಿಂದ ಪಶುಪಕ್ಷಿಗಳೆಲ್ಲ ಮೋಹಿತ ಹೊಂದಿ ನಿಮ್ಮ ಬಳಿಗೆ ಬರುವವು.

### ಯಂತ್ರಗಳು

## ಸರ್ವ ಸಿದ್ಧಿ ಮೋಹನ ಯಂತ್ರ

| | | | |
|---|---|---|---|
| ೯ | ೧೫ | ೩ | ೭ |
| ೬ | ೩ | ೧೩ | ೧೧ |
| ೧೪ | ೯ | ೧೯ | ೯ |
| ೪ | ೫ | ೧ | ೧೨ |

ಬಿಳಿಯ ಕಾಗದದ ಮೇಲೆ ಅರಿಷಣ ಬಣ್ಣದಿಂದ ಈ ಯಂತ್ರವನ್ನು ಬರೆಯಬೇಕು. ಅದನ್ನು ತಿನ್ನುವ ಎಣ್ಣೆಯಲ್ಲಿ ಎದ್ದಿ ಬೆಂಕಿಗೆ ಆಹುತಿಯನ್ನು ಕೊಡಬೇಕು, ಹೀಗೆ ಇಪ್ಪತ್ತೊಂದು ದಿನಗಳವರೆಗೆ ಮಾಡಲಾಗಿ ಸಿದ್ಧಿಯು ದೊರೆಯುವದು. ಆಗ ನಿಮ್ಮೆಲ್ಲ ಕಾರ್ಯಗಳು ಕೈಗೂಡುವವು ಸರ್ವ ಕಾಮನೆಗಳು ಪೂರ್ತಿಯಾಗುವವು.

## ಸ್ತ್ರೀ ಮೋಹನ ಯಂತ್ರ

| | | | |
|---|---|---|---|
| ೫೯ | ೬೩ | ೨ | ೮ |
| ೭ | ೩ | ೬೩ | ೬೦ |
| ೬೫ | ೬೦ | ೯ | ೯ |
| ೬ | ೬ | ೬೧ | ೬೪ |

ಪುಷ್ಯ ನಕ್ಷತ್ರವಿರುವ ದಿನದ ಶುಭ ಮುಹೂರ್ತವನ್ನು ಸಾಧಿಸಿ ಯಂತ ವನ್ನು ಭೋಜಪತ್ರದ ಮೇಲೆ ಸ್ತ್ರೀಯ ಮೊಲೆ ಹಾಲಿನಿಂದಬರೆಯ ಬೇಕು, ನಂತರ ಈ ಯಂತ್ರವನ್ನು ಕೊರಳಲ್ಲಿ ಕಟ್ಟಿಕೊಳ್ಳಬೇಕು. ಆಗ ನೀವು ಯಾವ ಸ್ತ್ರೀಯನ್ನು ಮೋಹಿತಗೊಳಿಸಬೇಕೆಂದು ಬಯಸುವಿರೋ ಅವಳು ನಿಮ್ಮ ಬಳಿಗೆ ಬರುವಳಲ್ಲದೇ ನಿಮ್ಮ ಅಜ್ಞಾನುವರ್ತಿಯಾಗಿರುವಳೆಂಬುದರಲ್ಲಿಸಂಶಯವಿಲ್ಲ

## ಇನ್ನೊಂದು ಯಂತ್ರ

| | | | |
|---|---|---|---|
| ೧ | ೫ | ೯ | ೭ |
| ೬ | ೩ | ೨ | ೩ |
| ೪ | ೮ | ೧ | ೧ |
| ೫ | ೪ | ೩ | ೨ |

ಪೀಪಲ ಗಿಡದ ಕೆಳಗೆ ಕುಳಿತುಕೊಂಡು ಈ ಯಂತ್ರವನ್ನು ಬರೆಯಬೇಕು, ಸಿಸವಿ ಕಟ್ಟಿಗೆಯನ್ನು ಲೇಖನಿಯಾಗಿ ಮಾಡಿಕೊಂಡು ಈ ಮಂತ್ರವನ್ನು ಬರೆಯಬೇಕು, ಈ ಯಂತ್ರವನ್ನು ನೋಡಿದಯಾವದೇ ಸ್ತ್ರೀಯು ನಿಮ್ಮ ಕಡೆಗೆ ಮೋಹಿತಳಾಗಿ ಬರುವಳಲ್ಲದೇ ಸದಾಕಾಲ ನಿಮ್ಮ ವಶದಲ್ಲಿಯೇ ಉಳಿಯುವದು ಅತ್ಯಂತ ಖಾತ್ರಿಯಾದುದೆಂದು ತಿಳಿದುಕೊಳ್ಳಬೇಕು.

## ಸರ್ವ ಮೋಹನ ಯಂತ್ರ

| | | | |
|---|---|---|---|
| ೮ | ೮೭ | ೧ | ೮೦ |
| ೩ | ೮೮ | ೯೧ | ೯೬ |
| ೯೬ | ೩ | ೮೫ | ೬ |
| ೪ | ೭ | ೮೦ | ೪ |

ಈ ಯಂತ್ರವನ್ನು ಮಾಲಿಕಾಂಗನಿಯ ರಸದಿಂದ ಬರೆಯಬೇಕು, ಶುಕ್ಲಪಕ್ಷದ ಚತುರ್ದಶಿಯ ದಿವಸದಂದು ಈ ಯಂತ್ರವನ್ನು ಬರೆಯಬೇಕು, ಈ ಯಂತ್ರವನ್ನು ಯಾರು ನೋಡುವರೋ ಯಾರ ಕಣ್ಣಿಗೆ ಇದು ಬೀಳುವದೋ ಅವರು ನಿಮ್ಮ ಬಳಿಗೆ ಮೋಹಿತರಾಗಿ ಬರುವರೆಂಬದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಸ್ತ್ರೀ ಮೋಹನದ ಮತ್ತೊಂದು ಯಂತ್ರ

| | | | |
|---|---|---|---|
| ೬೯ | ೭೩ | ೩ | ೫ |
| ೭ | ೯ | ೭ | ೬೩ |
| ೭೫ | ೧೭ | ೮ | ೧ |
| ೭ | ೫ | ೧೭ | ೭೫ |

ಭೋಜಪತ್ರದ ಮೇಲೆ ಸ್ತ್ರೀಯ ಮೊಲೆ ಹಾಲಿನಿಂದ ಈ ಯಂತ್ರವನ್ನು ಪುಷ್ಯ ನಕ್ಷತ್ರದ ಮುಹೂರ್ತವನ್ನು ಆರಿಸಿಕೊಂಡು ಬರೆಯಬೇಕು. ನಂತರ ಇದನ್ನು ಎಡಗೈಗೆ ಕಟ್ಟಿಕೊಳ್ಳಬೇಕು. ಆಗ ನೀವು ಇಚ್ಛಿಸಿದ ಸ್ತ್ರೀಯು ಮೋಹಿತಳಾಗಿ ಬಂದು ನಿಮ್ಮ ದಾಸಿಯಾಗುಳುಯುವಳು.

ಇದಲ್ಲದೇ ಕೆಂಪು ಕಾಗದದ ಮೇಲೆ ಚಂದನದಿಂದಲೂ ಈ ಮಂತ್ರವನ್ನು ಬರೆಯಬಹುದು. ನೀವು ಯಾವ ಸ್ತ್ರೀಯನ್ನು ಮೋಹಿತಗೊಳಿಸ

ಬೇಕೆಂದು ಇಚ್ಛಿಸುವಿರೋ ಆ ಸ್ತ್ರೀಯ ಸೀರೆಗೆ ಈ ಯಂತ್ರವನ್ನು ಕಟ್ಟ ಬೇಕು, ಆಗ ಆ ಸ್ತ್ರೀಯು ನಿಮ್ಮ ಬಳಿಗೆ ಮೋಹಿತಳಾಗಿ ಬಂದು ನಿಮ್ಮ ಇಷ್ಟಾರ್ಥವು ಸಿದ್ಧಿಸುವದೆಂದು ತಿಳಿಯಬೇಕು.

## ಪತಿಮೋಹನ ಯಂತ್ರ

| | | | |
|---|---|---|---|
| | ಶ್ರೀ | | |
| | | | ಕ್ಷ |
| ಶ್ರೀ | | | ಕ್ಷ |
| | ಶ್ರೀ | | |

ಕೇಶರ ಗೋಪಿಚಂದನಗಳ ಮಸಿಯನ್ನು ಸಿದ್ಧಪಡಿಸಿ ಡಾಳಿಂಬರ ಗಿಡದ ಕಟ್ಟಿಗೆಯ ಲೇಖಣಿಯಿಂದ ಈ ಯಂತ್ರವನ್ನು ಆ ಮಸಿಯಿಂದಬರೆಯಬೇಕು, ಈ ಯಂತ್ರವನ್ನು ಸ್ತ್ರೀಯರು ಅತ್ಯಂತ ಭಕ್ತಿ ಪೂರ್ವಕವಾಗಿ ಪೂಜಿಸಬೇಕು, ಮುಂಜಾನೆ ಅದನ್ನು ಹೆರಳಲ್ಲಿ ಧರಿಸಬೇಕು, ಎರಡು ದಿವಸ ಹಾಗೆಯೇ ಇರಬೇಕು, ಆ ಎರಡು ದಿವಸಗಳ ವರೆಗೆ ಮೂಕವಾಗಿರಬೇಕು ಉಪವಾಸ ಮಾಡಬೇಕು, ಆನಂತರ ಆದನ್ನು ಅಷ್ಟಲೋಹಗಳಿಂದ ಸಿದ್ಧ ಪಡಿಸಿದ ತಾಯಿತದಲ್ಲಿ ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು, ಪ್ರತಿ ಆದಿತ್ಯ ವಾರ ಧೂಪದೀಪಾದಿಗಳಿಂದ ಅದನ್ನು ಪೂಜಿಸಬೇಕು, ಅಂದು ಸಹ ಮೌನ ಪಾಲಿಸಬೇಕಲ್ಲದೇ ಉಪವಾಸವಿರಬೇಕು, ಅಲ್ಲದೇ ಪತಿಯ ಹೆಸರನ್ನು ತೆಗೆದುಕೊಂಡು ಜಪಮಾಡಬೇಕು, ಈ ಸಾಧನೆಯಿಂದ ಪತಿಯು ಪ್ರಸನ್ನ ಚಿತ್ತನಾಗುವನಲ್ಲದೇ ಪತ್ನಿಯನ್ನು ದೇವಿಯೆಂದು ತಿಳಿಯತೊಡಗುವನು, ಗೌರವಿಸತೊಡಗುವನು, ಹೀಗೆ ಪತ್ನಿಯ ಇಷ್ಟಾರ್ಥ ಸಿದ್ಧವಾಗಿ ಪತಿಯ ಪ್ರೀತ್ಯಾದರಗಳಿಗೆ ಪಾತ್ರಳಾಗುವದರಲ್ಲಿ ಸಂದೇಹವಿಲ್ಲ.

## ರಾಜ್ಯಮೋಹನ ಯಂತ್ರ

| | | | |
|---|---|---|---|
| ೫ | ೫ | ೫ | ೫ |
| ೩ | ೩ | ೩ | ೩ |
| ದೇ | ವ | ದ | ತ್ತ |
| ಹ್ರೀಂ | ಹ್ರೀಂ | ಹ್ರೀಂ | ಹ್ರೀಂ |
| ೫ | ೫ | ೫ | ೫ |
| ೩ | ೩ | ೩ | ೩ |

ಡಾಳಿಂಬರಿ ಗಿಡದ ಕಟ್ಟಿಗೆಯನ್ನು ಲೇಖನಿಯನ್ನಾಗಿ ಮಾಡಿಕೊಂಡು ಬಂದೂಕಿನ ಮದ್ದಿನ ಮಸಿಯಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಹುಲಿಯ ಕೂದಲಿನ ಹಗ್ಗವನ್ನು ಮಾಡಿಕೊಂಡು ಅದರಿಂದ ಯಂತ್ರವನ್ನು ಕೈಗೆ ಕಟ್ಟಿಕೊಳ್ಳಬೇಕು, ಅದರಿಂದ ಸರಕಾರದಲ್ಲಿ ಮಾನ್ಯತೆ ದೊರೆತು ರಾಜ್ಯಕ್ಕೆ ಸಂಬಂಧಿಸಿದ ಸರ್ವ ಇಷ್ಟಗಳೂ ಪೂರ್ತಿಯಾಗಿ ಫಲಿಸುವವೆಂಬದು ಅತ್ಯಂತ ನಿಶ್ಚಿತವೆಂದು ತಿಳಿಯಬೇಕು.

## ಸರ್ವ ಮೋಹನ ಯಂತ್ರ

| | | | |
|---|---|---|---|
| ೧೫ | ೫೬ | ೯ | ೧೩ |
| ೧ | ೬೧ | ೬೩ | ೧೪ |
| ೪೬ | ೪ | ೧೮ | ೯೧ |
| ೮ | ೬೭ | ೩೮ | ೫೮ |

ಈ ಯಂತ್ರದಿಂದ ಸರ್ವರನ್ನು ಮೋಹಿತಗೊಳಿಸಲು ಬರುವದು. ಅದಕ್ಕಾಗಿ ಇದನ್ನು ಕಾಗದದ ಮೇಲೆ ಒಂದೂಕಾಲ ಲಕ್ಷ ಸಲ ಬರೆಯಬೇಕು, ತದನಂತರ ಅವಿವಾಹಿತ ಸ್ತ್ರೀಯರಿಗೆ ಭೋಜನ ನಡೆಸಬೇಕು, ಆಗ ಯಂತ್ರವು ಫಲಗಳನ್ನು ಕೊಡುವದು, ಅಂದರೆ ಸರ್ವರೂ ನಿಮ್ಮ ಬಗೆಗೆ ಮೋಹಿತರಾಗುವರೆಂದು ತಿಳಿಯಿರಿ.

# ವಿದ್ವೇಷಣ ಸಾಧನೆಯು

ವಿದ್ವೇಷಣ ಕರ್ಮ ಸಾಧನೆಯಿಂದ ವೈರವನ್ನು ಸುಲಭವಾಗಿ ಉತ್ಪನ್ನ ಗೊಳಿಸಬಹುದಾಗಿರುವದು. ಸಾಧಕನು ಇಬ್ಬರು ಮಿತ್ರರಲ್ಲಿ ವೈರವನ್ನುಂಟು ಮಾಡಿ ತನ್ನ ಕಾರ್ಯವನ್ನು ನೆರವೇರಿಸಿಕೊಳ್ಳಬಹುದಾಗಿದೆ. ಆದರೆ ಈ ಕರ್ಮ ಸಾಧನೆಯು ತೀವ್ರತರವಾಗಿದ್ದು ಅದರಿಂದಾಗುವ ಪರಿಣಾಮಗಳನ್ನು ಮೊದಲೇ ಲಕ್ಷಿಸಿಕೊಂಡು ಕಾರ್ಯಪ್ರವೃತ್ತರಾಗುವದು ಒಳಿತು. ಒಮ್ಮೆ ಉಂಟಾದ ಪರಿಣಾಮಗಳನ್ನು ಹೋಗಲಾಡಿಸುವದ ತುಂಬಾ ಕಷ್ಟಸಾಧ್ಯ ವೆಂಬುದನ್ನು ಈ ಹೊತ್ತಿನಲ್ಲಿ ಲಕ್ಷಿಸಬೇಕಾದುದು ಅತ್ಯವಶ್ಯವಾಗಿರುವದು ಅನವಶ್ಯಕ ಪ್ರಸಂಗಗಳಲ್ಲಿ ಈ ತೀವ್ರವಾದ ಕ್ರಮವನ್ನು ಕೈಕೊಳ್ಳಲು ಹೋಗಬಾರದು-

ಓಂ ನಮೋ ನಾರದಾಯ (ಅಮುಕೆ) ಸ್ಯ (ಅಮುಕ) ನ ಸಹ ವಿದ್ವೇಷಣಂ ಕುರು ಕುರು ಸ್ವಾಹಾ|| ಎಂಬುದು ವಿದ್ವೇಷಣದ ಮೂಲ ಮಂತ್ರ ವಾಗಿರುವದು. ಈ ಮಂತ್ರವನ್ನು ಒಂದು ಲಕ್ಷಸಲ ಜಪಿಸಿದಲ್ಲಿ ಮಂತ್ರದ ಸಿದ್ಧಿಯು ಪ್ರಾಪ್ತವಾಗುವದು. ನಂತರ ಈ ಮಂತ್ರವನ್ನು ಪ್ರಯೋಗಿಸುವ ಕಾಲದಲ್ಲಿ ೧೦೮ ಸಲ ಜಪಿಸಿದಲ್ಲಿ ಪ್ರಯೋಗದ ಸಿದ್ಧಿಯಾಗುವದು, ಸಿದ್ಧಿ ದೊರೆತೊಡನೆ ಪ್ರಯೋಗದ ಕಾಲದಲ್ಲಿ ಯಾರ ಯಾರಲ್ಲಿ ವೈರವುಂಟುಮಾಡ ಬೇಕೆಂಬ ಇಚ್ಛೆಯಿರುವದೋ ಅಮುಕ ಎಂಬಲ್ಲಿ ಅವರ ಹೆಸರನ್ನು ಸೇರಿಸ ಬೇಕು. ಆಗ ಅವರಿಬ್ಬರಲ್ಲಿ ವೈರವುಂಟಾಗುವದು ನಿಜವೆಂದು ತಿಳಿಯಿರಿ.

## ಶತ್ರು ವಿದ್ವೇಷಣ ಮಂತ್ರ

ಓಂ ಗಂ ಗ್ರಾಂ ಗ್ರಿಂ ಗ್ರುಂ ಹಾ ಸಿತ ಮಂತ್ರೋಕ್ತ ದ್ರಾಂ ದ್ರಾಂ ದ್ರಾಂ ಥ್ವಾಂ ಥ್ವಾಂ ಥ್ವಾಂ ಆಹಿ ಆಹಿ ಓಂ ಹ್ರೀಂ ಹ್ರೀಂ ಹ್ರೀಂ.

ರವಿವಾರ ಇಲ್ಲವೇ ಮಂಗಳವಾರ ಶುಭಮುಹೂರ್ತವನ್ನು ಹುಡುಕಿ ಕೊಂಡು ಮುಳ್ಳುಹಂದಿಯ ಚರ್ಮದ ಆಸನದ ಮೇಲೆ ಕುಳಿತುಕೊಂಡು ಈ

ಮಂತ್ರವನ್ನು ಜಪಿಸಬೇಕು. ಒಂದೂಕಾಲು ಲಕ್ಷ ಸಲ ಇದನ್ನು ಜಪಿಸ ದಲ್ಲಿ ಮಂತ್ರದ ಸಿದ್ಧಿಯು ದೊರೆಯುವದು. ಹೋವವನ್ನು ಮಾಡಿಮುಳ್ಳ ಹಂದಿಯ ಮುಳ್ಳುಗಳ ಹವನವನ್ನು ಮಾಡಬೇಕು. ತದನಂತರ ಈ ಮುಳ್ಳು ಗಳನ್ನು ಅಭಿಮಂತ್ರಿಸಬೇಕು, ಅವನ್ನು ಶತ್ರುವಿನ ಮನೆಯ ಹೆಬ್ಬಾಗಿಲ ಮಾಡದ ಮೇಲೆ ಇಟ್ಟು ಬರಬೇಕು, ಆಗ ಮನೆಯವರಲ್ಲದೇ ಎಲ್ಲರೂ ಅವ ನೊಂದಿಗೆ ವೈರವನ್ನು ಸಾಧಿಸುವದು ನಿಜವೆಂದು ತಿಳಿಯಬೇಕು.

<u>ಪ್ರಯೋಗಗಳು</u>

## ವಿದ್ವೇಷಣ ಪ್ರಯೋಗ

ಆನೆ ಸಿಂಹಗಳ ಹಲ್ಲುಗಳ ಪುಡಿಮಾಡಿ ಬೆಣ್ಣೆಯಲ್ಲಿ ಸೇರಿಸಿ ಮಿಶ್ರಣ ವನ್ನು ಸಿದ್ಧಪಡಿಸಬೇಕು, ಅದನ್ನು ವಿದ್ವೇಷಣ ಮಂತ್ರ ಸಹಿತವಾಗಿ ಹವನ ಮಾಡಬೇಕು, ಅದರಿಂದ ನೀವು ಯಾರ ಇಬ್ಬರಲ್ಲಿ ವೈಮನಸ್ಸುಂಟಾಗ ಬೇಕೆಂದು ಬಯಸುತ್ತಿರುವಿರೋ ಅವರಲ್ಲಿ ವೈರತ್ವವುಂಟಾಗುವದೆಂದು ತಿಳಿಯಬೇಕು.

ಯಾರ ಇಬ್ಬರಲ್ಲಿ ಶತ್ರುತ್ವವುಂಟಾಗಬೇಕೆಂದು ನೀವು ಬಯಸುತ್ತಿರು ವಿರೋ ಅವರ ಕಾಲಿನ ಧೂಳಿಯನ್ನು ಸಂಪಾದಿಸಬೇಕು. ಸಿಂಹ, ಆನೆಗಳ ಕೂದಲುಗಳನ್ನು ತರಬೇಕು. ಅವನ್ನು ಧೂಳಿಯಲ್ಲಿ ಸೇರಿಸಿ ಒಂದು ಗಂಟಿ ನಲ್ಲಿ ಕಟ್ಟಿಡಬೇಕು, ಈ ಗಂಟನ್ನು ಒಂದು ಸ್ಥಳದಲ್ಲಿ ಹೂಳಿಡಬೇಕು, ಆಗ ನೀವು ಬಯಸಿದ ಇಬ್ಬರಲ್ಲಿಯೂ ಅತ್ಯವಶ್ಯವಾಗಿ ಶತ್ರುತ್ವವುಂಟಾಗುವದೆಂದು ತಿಳಿಯಬೇಕು.

## ಪತಿಪತ್ನಿಯರಲ್ಲಿ ವಿದ್ವೇಷಣವುಂಟು ಮಾಡುವ ಪ್ರಯೋಗ

ಪತಿ-ಪತ್ನಿಯರಲ್ಲಿ ವಿದ್ವೇಷಣವುಂಟು ಮಾಡಲು ಈ ರೀತಿ ಪ್ರಯೋಗ ಮಾಡಬೇಕಾಗುವದು, ಅವರ ಕಾಲಧೂಳಿಯನ್ನು ತರಬೇಕು. ಬೆಕ್ಕಿನ ಲದ್ದಿ ಹಾಗೂ ಇಲಿಯ ಹಿಕ್ಕೆಗಳನ್ನು ಈ ಮಣ್ಣಿನಲ್ಲಿ ಸೇರಿಸಿ ಒಂದುಮೂರ್ತಿ

ಯನ್ನು ಸಿದ್ಧಪಡಿಸಬೇಕು. ಅದಕ್ಕೆ ಕರಿವಸ್ತ್ರ ಸುತ್ತಿ ೧೦೮ ಸಲ ಅದನ್ನು ಅಭಿಮಂತ್ರಿಸಬೇಕು ಇದನ್ನು ಯಾರ ಮನೆಯಲ್ಲಿ ಇಡಲಾಗುವದೋ ಆ ಮನೆಯಲ್ಲಿ ಗಂಡ ಹೆಂಡಿರಲ್ಲಿ ವೈಮನಸ್ಸುಂಟಾಗಿ ಕೊನೆಯ ವರೆಗೂ ಅದು ಉಳಿದು ಬರುವದು ಅತ್ಯಂತ ನಿಜವಾದುದೆಂದು ತಿಳಿಯಬೇಕು.

## ಮತ್ತೊಂದು ವಿದ್ವೇಷಣ ಪ್ರಯೋಗ

ಸಿಂಹ ಹಾಗೂ ಆನೆಯ ಹಲ್ಲುಗಳನ್ನು ಸೇರಿಸಿ ಯಾರ ಯಾರ ನಡುವೆ ವಿದ್ವೇಷಣವುಂಟು ಮಾಡುವದಿರುವದೋ ಅವರ ಹೆಸರನ್ನು ತೆಗೆದು ಕೊಂಡು ಅಗ್ನಿಯಲ್ಲಿ ಹವನ ಮಾಡಬೇಕು, ಹೀಗೆ ಮಾಡಿದಲ್ಲಿ ಹೆಸರು ತೆಗೆದುಕೊಂಡವರ ನಡುವೆ ಅತ್ಯವಶ್ಯವಾಗಿ ವೈಮನಸ್ಸುಂಟಾಗುವದೆಂದು ತಿಳಿಯಬೇಕು.

## ಅಜನ್ಮ ವಿದ್ವೇಷಣ ಪ್ರಯೋಗ

ಯಾರ ಯಾರಲ್ಲಿ ವೈರವನ್ನು ಶಾಶ್ವತವಾಗಿ ಉಂಟು ಮಾಡಬೇಕೆಂದಿರು ವಿರೋ ಅವರ ಪಾದದ ಧೂಳಿಯನ್ನು ತರಬೇಕು, ಅದರಿಂದ ಎರಡುಗೊಂಬೆ ಗಳನ್ನು ಸಿದ್ಧಪಡಿಸಬೇಕು. ಅವೆರಡೂ ಗೊಂಬೆಗಳನ್ನು ಅಭಿಮಂತ್ರಿಸಿ ಸ್ಮಶಾನದಲ್ಲಿ ಒಯ್ದು ಒಂದರ ವಿರುದ್ಧ ಒಂದನ್ನು ಹೂಳಬೇಕು, ಅಂದರೆ ಯಾರ ಹೆಸರನ್ನು ತೆಗೆದುಕೊಂಡಿರುವಿರೋ ಅವರಲ್ಲಿ ಆ ಜನ್ಮ ವೈರವುಂಟಾಗಿ ಶಾಶ್ವತವಾಗಿ ವೈಮನಸ್ಸು ಉಳಿಯುವದು ಅತ್ಯಂತ ಖಾತ್ರಿಯಾಗಿರುವದು.

| | |
|---|---|
| ೩೬ | ೩೬ |
| ೩೬ | ೩೬ |
| ೩೬ | ೩೬ |

ಯಂತ್ರಗಳು

## ವಿದ್ವೇಷಣ ಯಂತ್ರ

ಈ ಯಂತ್ರವನ್ನು ಎರಡು ಭೋಜಪತ್ರಗಳ ಮೇಲೆ ಪ್ರತ್ಯೇಕವಾಗಿ ಬರೆಯಬೇಕು, ಯಾರ ಯಾರಲ್ಲಿ ವೈಮನಸ್ಸನ್ನುಂಟು ಮಾಡಬೇಕೆಂಬು

ನೀವು ಬಯಸುವಿರೋ ಅವರ ಹಾಸಿಗೆಯ ಕೆಳಗೆ ಅವನ್ನು ಇರಿಸಬೇಕು, ಹಾಗಾದಲ್ಲಿ ಅವರಿಬ್ಬರಲ್ಲೂ ವೈರತ್ವವುಂಟಾಗುವದರಲ್ಲಿ ಯಾವದೇ ತರದ ಸಂದೇಹವಿರುವದಿಲ್ಲ

### ಶತ್ರುತ್ವವನ್ನುಂಟು ಮಾಡುವ ಯಂತ್ರ

| | | | |
|---|---|---|---|
| ೫ | ೪೫ | ೧ | ೩೪ |
| ೯ | ೭ | ೫೮ | ೭೫ |
| ೬೪ | ೫೮ | ೩೨ | ೪ |
| ೫ | ೫ | ೨೩ | ೭೫ |

ಈ ಯಂತ್ರವನ್ನು ಎರಡು ಕಾಗದಗಳ ಮೇಲೆ ಪ್ರತ್ಯೇಕವಾಗಿಬರೆಯಬೇಕು, ಯಾರ ಯಾರಲ್ಲಿ ವೈರವುಂಟು ಮಾಡಬೇಕೆಂದು ನೀವು ಬಯಸುವಿರೋ ಅವರ ಮನೆಗಳಲ್ಲಿ ಈ ಯಂತ್ರಗಳನ್ನು ಇರಿಸಬೇಕು, ಅವರಿಬ್ಬರಲ್ಲಿ ತ್ವರಿತದಲ್ಲಿ ಕಲಹವು ಸಂಭವಿಸಿ ವೈರವು ಪ್ರಾರಂಭವಾಗುವದು ನಿಶ್ಚಿತವೆಂದು ತಿಳಿಯಬೇಕು.

### ಗೃಹಕಲಹವುಂಟು ಮಾಡುವ ಯಂತ್ರ

| | | | |
|---|---|---|---|
| ೨೧ | ೨೧ | ೨೧ | ೨೧ |
| ೨೧ | ೨೧ | ೨೧ | ೨೧ |
| ೨೧ | ೨೧ | ೨೧ | ೨೧ |
| ೨೧ | ೨೧ | ೨೧ | ೨೧ |

ಈ ಯಂತ್ರವನ್ನು ಶನಿವಾರ ದಿವಸ ಭೋಜಪತ್ರದ ಮೇಲೆ ಬರೆಯಬೇಕು, ಯಾರ ಮನೆಯಲ್ಲಿ ಗೃಹಕಲಹವುಂಟು ಮಾಡಬಯಸುವಿರೋ ಆ ಶತ್ರುವಿನ ಮನೆಯಲ್ಲಿ ಈ ಯಂತ್ರವನ್ನು ಇಡಬೇಕು, ಆಗ ಆ ಮನೆಯಲ್ಲಿ ಗೃಹಕಲಹವು ತಂತಾನೇ ಪ್ರಾರಂಭವಾಗುವದರಲ್ಲಿ ಸ್ವಲ್ಪವೂ ಸಂದೇಹವಿಲ್ಲ.

## ಇನ್ನೊಂದು ಯಂತ್ರ

| | | | |
|---|---|---|---|
| ೮೦ | ೧೨ | ೮ | ೮ |
| ೫೬ | ೬೪ | ೬೧ | ೭೪ |
| ೬೪ | ೧೨ | ೮ | ೬೭ |
| ೪೬ | ೫೫ | ೫೧ | ೫೭ |

ಕರಿ ಆಕಳ ಸೆಗಣಿಯಿಂದ ಈ ಯಂತ್ರವನ್ನು ಆಖಪತ್ರದ ಮೇಲೆ ಬರೆಯಬೇಕು, ನಂತರ ಅದನ್ನು ಯಾ ರ ಲ್ಲಿ .ಗೃಹಕಲಹವುಂಟು ಮಾಡಬೇಕಾಗಿರುವದೋ ಅವರ ಮನೆಯಲ್ಲಿ ಒಯ್ದು ಇರಿಸಬೇಕು, ಆಗ ಅವರ ಮನೆಯಲ್ಲಿ ಅತ್ಯವಶ್ಯ ವಾಗಿ ಗೃಹಕಲಹ ಪ್ರಾ ಂಭವಾಗು ವದೆಂದು ತಿಳಿಯಬೇಕು.

## ವಿರೋಧವುಂಟು ಮಾಡುವ ಯಂತ್ರ

| | | | |
|---|---|---|---|
| ೫೮ | ೬೫ | ೯ | ೨೧ |
| ೬ | ೩೦ | ೨ | ೬೧ |
| ೬೪ | ೫ | ೮೮ | ೧೧ |
| ೧೫ | ೮೩ | ೭೪ | ೮೫ |

ಈ ಯಂತ್ರವನ್ನು ಊಟದಎಲೆಯ ಮೇಲೆ ಅಕ್ಕಿ ಹಿಟ್ಟಿನಿಂದ ಬರೆಯ ಬೇಕು, ನಂತರ ಅದನ್ನು ಸ್ಮಸಾ ನಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ೨೧ ದಿನಗಳ ವರೆಗೆ ಹೂಳಿಡ ಬೇಕು, ಆ ಮೇಲೆ ಯಾವ ಮನೆ ಯಲ್ಲಿ ವಿರೋಧವುಂಟು ಮಾಡ ಬೇಕೆಂದು ನೀವು ಬಯಸುತ್ತಿರು ವಿರೋ ಆ ಮನೆಯಲ್ಲಿ ಈ ಯಂತ ವನ್ನು ಇರಿಸಿ ಬರಬೇಕು. ತದನಂತರ ಆ ಮನೆಯ ಪಶ್ಚಿಮ ದಿಕ್ಕಿನಲ್ಲಿ ಮೂತ್ರಿಯನ್ನು ಮಾಡಬೇಕು, ಆಗ ಆ ಮನೆಯಲ್ಲಿ ಪರಸ್ಪರರಲ್ಲಿ ವಿರೋಧ ವುಂಟಾಗುವದು ಅತ್ಯಂತ ಖಂಡಿತವೆಂದು ತಿಳಿಯಬೇಕು.

# ಉಚ್ಚಾಟನ ಕರ್ಮ ಸಾಧನೆಯು

ಈ ಕರ್ಮಸಾಧನೆಯಲ್ಲಿ ಯಾವನೇ ಒಂದು ವ್ಯಕ್ತಿಯನ್ನು ಉಚ್ಚಾಟನಗೊಳಿಸುವಂತಹ ಶಕ್ತಿಯಿರುವದು. ಸ್ತ್ರೀ, ಧನ, ಪುತ್ರ, ಹೊಲ ಇತ್ಯಾದಿಗಳನ್ನು ಯಾರಾದರೂ ಅಪಹರಿಸಿದ್ದಲ್ಲಿ ಅವರನ್ನು ಉಚ್ಚಾಟನಗೊಳಿಸಲು ಈ ಮಂತ್ರವು ಸಹಾಯಕಾರಿಯಾಗುವದು. ಇಬ್ಬರು ವ್ಯಕ್ತಿಗಳನ್ನು ಅಗಲಿಸಲು ಸಹ ಇದರಿಂದ ಪ್ರಯೋಜನವು ದೊರೆಯುವದು. ಇದೂ ಒಂದು ವಿಧ್ವಂಸಕ ಸ್ವರೂಪದ ಕರ್ಮವೆಂದು ಭಾವಿಸಲಾಗಿರುವವರಿಂದ ಇದನ್ನು ಪ್ರಯೋಗಿಸುವ ಕಾಲಕ್ಕೆ ಬಹಳೇ ಲಕ್ಷಪೂರ್ವಕವಾಗಿ ನಡೆದುಕೊಳ್ಳುವದು ಅತ್ಯಂತ ಅವಶ್ಯವಿರುವದೆಂಬದನ್ನು ಮರೆಯಬಾರದು.

ಓಂ ನಮೋ ಭಗವತೆ ರುದ್ರಾಯ ಕರಾಲ ದಂಷ್ಟ್ರಾಯ (ಹೆಸರು)
ಪುತ್ರಬಾಂಧವೈಃ ಸಹ ಹನಹನ ದಹದಹ ಪಚಪಚ
ಶೀಘ್ರುಮುಚ್ಚಾಟಯ| ಹೂಂ ಫಟ್ ಸ್ವಾಹಾ ಠಃ ಠಃ||

ಇದು ಉಚ್ಚಾಟನದ ಮುಖ್ಯ ಮಂತ್ರವಾಗಿರುವದು. ಉಚ್ಚಾಟನ ಪ್ರಯೋಗ ಮಾಡುವ ಮೊದಲು ಹತ್ತುಸಾವಿರ ಸಲ ಇದನ್ನು ಜಪಿಸಬೇಕು, ಆಗ ಈ ಮಂತ್ರ ಸಿದ್ಧಿಯು ದೊರೆಯುವದು. ಮುಂದೆ ಇದರ ಪ್ರಯೋಗ ಕಾಲದಲ್ಲಿ ಪ್ರತಿಯೊಂದು ಪ್ರಯೋಗ ಕಾಲದಲ್ಲಿ ೧೦೮ ಸಲ ಈ ಮಂತ್ರದಿಂದ ಅಭಿಮಂತ್ರಿಸಿದಲ್ಲಿ ಪ್ರಯೋಗ ಸಿದ್ಧಿಯು ಪ್ರಾಪ್ತವಾಗುವದು. ಪ್ರಯೋಗದ ಕಾಲಕ್ಕೆ ಅಭಿಮಂತ್ರಿಸುವಾಗ ಯಾರ ಮೇಲೆ ಇದರಪ್ರಯೋಗ ಮಾಡುವದಿರುವದೋ ಅವರ ಹೆಸರನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕೆಂಬುದನ್ನು ಲಕ್ಷಿಸಬೇಕಾದ ಸಂಗತಿಯಾಗಿರುವದು.

## ಶತ್ರು ಉಚ್ಚಾಟನ ಮಂತ್ರ

ಓಂ ಉಮ್ ತುಂಗ ಸ್ಫುಲಿಂಗ ಬ್ರೂಃ ಬ್ರೀಮುಚಾಂಚಿಕ ವಿದ್ವದ್
ದಹನ ಮಾಂ ಥವನ ಸ್ಫ್ರೀಂ ಊಂ ಠಃ ಠಃ(ಹೆಸರು) ಉಚ್ಚಾಟನ

ರವಿವಾರ ಇಲ್ಲವೇ ಮಂಗಳವಾರ ಅಮವಾಸ್ಯೆಯು ಬಂದಿರುವಂತಹ ಯೋಗವನ್ನು ಹುಡುಕಬೇಕು. ಅಂದು ಮಧ್ಯರಾತ್ರಿಯಲ್ಲಿ ಒಂಟಿಯ ಚರ್ಮದ ಮೇಲೆ ಕುಳಿತುಕೊಂಡು ಬಿಳಿಗುಂಜಿಯ ಮಾಲೆಯಿಂದ ಶತ್ರುವಿನ ಹೆಸರನ್ನು ತೆಗೆದುಕೊಂಡು ಜಪಮಾಡಬೇಕು. ಈ ಮೇಲಿನ ಮಂತ್ರದಿಂದ ೧೦೮ ಸಲ ಜಪಿಸಬೇಕು. ಆಗ ಶತ್ರುವಿನ ಉಚ್ಚಾಟನೆಯಾಗುವದೆಂಬದ ರಲ್ಲಿ ಯಾವದೇ ರೀತಿಯ ಸಂದೇಹವಿಲ್ಲವೆಂದು ತಿಳಿಯಬೇಕು.

## ಇನ್ನೊಂದು ಮಂತ್ರ

ಓಂ ಉಮ್ ಕ್ಲಿಂ ಕ್ಲಿಂ ಸ್ವಾಹಾ (ಹೆಸರು)

ಮೊದಲು ಈ ಮಂತ್ರದಿಂದ ೧೦೮ ಸಲ ವಿಧಿ ಪೂರ್ವಕವಾಗಿ ಜಪ ವನ್ನು ಮಾಡಬೇಕು. ನಂತರ ಪ್ರಯೋಗಿಸಬೇಕು, ಆಗ ಶತ್ರುವಿನ ಉಚ್ಚಾ ಟನೆಯಾಗುವದರಲ್ಲಿ ಸಂದೇಹವಿಲ್ಲ. ಪ್ರಯೋಗದ ಕಾಲದಲ್ಲಿ ನೀವು ಯಾವ ಶತ್ರುವಿನ ಉಚ್ಚಾಟನೆಯಾಗಬೇಕೆಂದು ಬಯಸುತ್ತಿರುವಿರೋ ಅವನ ಹೆಸ ರನ್ನು ತೆಗೆದುಕೊಳ್ಳಬೇಕು.

## ಮತ್ತೊಂದು ಮಂತ್ರ

ಓಂ ನಮೋಭೋಮುಸ್ಯಾಯ (ಹೆಸರು) ಸ್ಯ ಗೃಹೆ ಉಚ್ಚಾಟನಂ ಕುರು ಕುರು ಸ್ವಾಹಾ

ಈ ಮಂತ್ರವನ್ನು ವಿಧಿಪೂರ್ವಕವಾಗಿ ಹತ್ತುಸಾವಿರ ಜಪಿಸಿದರೆ ಮಂತ್ರದ ಸಿದ್ಧಿಯು ದೊರೆಯುವದು. ಪ್ರಯೋಗ ಕೈಕೊಳ್ಳುವ ಸಮಯ ದಲ್ಲಿ ಯಾವ ಶತ್ರುವಿನ ಉಚ್ಚಾಟನೆಯಾಗಬೇಕೆಂದು ನೀವು ಬಯಸುತ್ತಿರು ವಿರೋ ಅವನ ಹೆಸರನ್ನು ತೆಗೆದುಕೊಳ್ಳಬೇಕು. ಪ್ರಯೋಗದ ಕಾಲಕ್ಕೆ ಈ ಮಂತ್ರವನ್ನು ಮತ್ತೆ ೧೦೮ ಸಲ ಜಪಿಸಬೇಕು. ಆಗ ಪ್ರಯೋಗವು ಸಿದ್ಧಿಯಾಗುವದು. ಅಂದರೆ ನಿಮ್ಮ ಶತ್ರುವಿನ ಉಚ್ಚಾಟನೆಯಾಗುವದೆಂದು ತಿಳಿಯಬೇಕು.

## ಇನ್ನೊಂದು ಮಂತ್ರ

ಓಂ ನಮೋ ನಾರಾಯಣ (ಹೆಸರು) ಸ್ಯ ಸಹ ಉಚ್ಚಾಟನ ಕುರು ಕುರು ಸ್ವಾಹಾ

ಈ ಮಂತ್ರವನ್ನು ಹತ್ತು ಸಾವಿರ ಸಲ ವಿಧ್ಯುಕ್ತವಾಗಿ ಮೊದಲು ಜಪಿಸಬೇಕು. ಪ್ರಯೋಗಿಸುವ ಕಾಲಕ್ಕೆ ಯಾರ ಯಾರ ಉಚ್ಚಾಟನೆಯಾಗ ಬೇಕೆಂದು ನೀವು ಬಯಸುವಿರೋ ಅವರ ಹೆಸರನ್ನು ತೆಗೆದುಕೊಂಡು ಈ ಮಂತ್ರದಿಂದ ಧೂಳಿಯನ್ನು ಅಭಿಮಂತ್ರಿಸಬೇಕು. ಅದನ್ನು ಶತ್ರುಗಳಮನೆ ಯಲ್ಲಿರಿಸಿ ಬರಬೇಕು. ಆಗ ಆ ಶತ್ರುಗಳು ನಿಶ್ಚಿತವಾಗಿಯೂ ಉಚ್ಚಾಟನೆ ಹೊಂದುವರೆಂಬಲ್ಲಿ ಯಾವ ತರದ ಸಂದೇಹವೂ ಬೇಡ.

## ಸರ್ವ ಉಚ್ಚಾಟನ ಮಂತ್ರ

ಓಂ ನಮೋ ಭಗವತೆ ಹ್ರೀಂ ಶ್ವೇತವಾಪೆ ನಮೋನಮಃ ಸ್ವಾಹಾ

ಮೊದಲು ಈ ಮಂತ್ರವನ್ನು ಒಂದು ಲಕ್ಷ ಸಲ ಜಪಿಸಿದಲ್ಲಿ ಮಂತ್ರ ಸಿದ್ಧಿಯು ಪ್ರಾಪ್ತವಾಗುವದು, ನಂತರ ಯಾರ ಉಚ್ಚಾಟನೆಗೊಳಿಸಬೇಕಾಗಿ ದೆಯೋ ಅವರ ಹೆಸರನ್ನು ತೆಗೆದುಕೊಂಡು ೧೦೮ ಸಲ ಜಪಿಸಿದಲ್ಲಿ ಸಾಧನೆ ಸಿದ್ಧಿಯಾಗುವದು, ಅಂದರೆ ಅವರ ಉಚ್ಚಾಟದೆಯಾಗುವದು ನಿಶ್ಚಿತವೆಂದು ತಿಳಿಯಬೇಕು.

## ವಿದೇಶಿ ಉಚ್ಚಾಟನ ಮಂತ್ರ

ಓಂ ಗ್ಲಿಂ ಗ್ಲಿಂ ಗ್ಲೊಂ ಓಂ ಶ್ರೀಂ ಹ್ರೀಂ ಹಃ ಹಃ

ಗಿಡದ ಕೆಳಗೆ ಕರಿಮೃಗ ಚರ್ಮದ ಮೇಲೆ ಕುಳಿತುಕೊಂಡು ಮತು ತೆಂಗಿನ ಪಾಕವನ್ನು ಸಿದ್ಧಪಡಿಸಬೇಕು. ಈ ಮೇಲೆ ಹೇಳಿದ ಮಂತ್ರದಿಂದೆ ಅದನ್ನು ೧೦೮ ಸಲ ಆಹುತಿ ಕೊಡಬೇಕು, ಆಗ ನಿಮ್ಮ ಶತ್ರುವು ಪರದೇಶ

ದಲ್ಲಿ ಎಷ್ಟೇ ದೂರದಲ್ಲಿದ್ದರೂ ಸಹ ನಿಶ್ಚಿತವಾಗಿಯೂ ಉಚ್ಚಾಟನೆ ಹೊಂದು ವನೆಂಬವರಲ್ಲಿ ಯಾವದೇ ರೀತಿ ಸಂದೇಹವೂ ಇಲ್ಲ.

ಪ್ರಯೋಗಗ ು

## ಸರ್ವ ಉಚ್ಚಾಟನ ಪ್ರಯೋಗ

ಚಿತಾಭಸ್ಮ, ಸಾಸ್ವಿ ಹಾಗು ಬ್ರಹ್ಮದಂಡಿಯನ್ನು ಒಂದುಗೂಡಿಸಿ ಮಹಾದೇವರ ಪಿಂಡಿಕೆಯ ಮೇಲೆ ಲೇಪಿಸಬೇಕು. ನಂತರ ಈ ಚೂರ್ಣ ವನ್ನು ಅಭಿಮಂತ್ರಿಸಬೇಕು, ಈ ಅಭಿಮಂತ್ರಿತವಾದ ಚೂರ್ಣವನ್ನು ಶನಿ ವಾರ ದಿವಸ ಯಾರ ಮನೆಯಲ್ಲಿ ಇರಿಸಿ ಬರಲಾಗುವದೋ ಆ ಮನೆಯಲ್ಲಿ ಪತಿ-ಪತ್ನಿ, ಬಂಧು-ಬಾಂಧವರಲ್ಲಿ ವೈರವು ಉಂಟಾಗಿ ಮುಂದೆ ದಿನ ದಿನಕ್ಕೆ ಅದು ಹೆಚ್ಚಿ ಆ ಮನೆತನವೇ ಉಚ್ಚಾಟನ ಹೊಂದುವದು ಅತ್ಯಂತ ಖಾತ್ರಿ ಎಂದು ತಿಳಿಯಿರಿ.

ಮಹಾದೇವರ ಮೇಲಿನ ನಿರ್ಮಾಲ್ಯ ಮತ್ತು ಬಿಳಿಸಾಸ್ವಿಯನ್ನು ಸೇರಿಸಿ ಸರ್ವೋಚ್ಚಾಟನ ಮಂತ್ರದಿಂದ ಅಭಿಮಂತ್ರಿಸಬೇಕು, ಅದನ್ನು ತೆಗೆದು ಕೊಂಡು ಹೋಗಿ ಯಾವ ಮನೆಯಲ್ಲಿ ಇಟ್ಟು ಬರಲಾಗುವದೋ ಆ ಮನೆ ಯಲ್ಲಿ ಶಾಂತಿಯು ನಷ್ಟವಾಗುವದಲ್ಲದೇ ಪರಸ್ಪರ ವೈಮನಸ್ಸುಂಟಾಗುವದು ಅದನ್ನು ತಿರುಗಿ ತೆಗೆದಲ್ಲಿ ಆ ಮನೆಯಲ್ಲಿ ಯಥಾ ಪೂರ್ವ ಪರಿಸ್ಥಿತಿಯು ಉಂಟಾಗುವದೆಂಬದನ್ನು ಲಕ್ಷಿಸಬೇಕು.

ಹಸ್ತಾ ನಕ್ಷತ್ರದ ಸಮಯದಲ್ಲಿ ಸೈಂದಲವನ ಉಪ್ಪಿನಿಂದ ಗಣಪತಿ ಮೂರ್ತಿಯನ್ನು ಸಿದ್ಧಪಡಿಸಬೇಕು, ಶತ್ರುವಿನ ಹೆಸರನ್ನು ತೆಗೆದುಕೊಂಡು ಆ ಮೂರ್ತಿಯನ್ನು ಅಭಿಮಂತ್ರಿಸಬೇಕು, ನಂತರ ಅದಕ್ಕೆ ಅಭಿಷೇಕಾದಿ ಗಳನ್ನು ಮಾಡಬೇಕು, ಮುಂದೆ ಆ ಮೂರ್ತಿಯ ಪರಿಸ್ಥಿತಿಯು ಹೇಗೆ ಹೇಗೆ ಆಗುವದೋ ಹಾಗೆ ಹಾಗೆ ಶತ್ರುವಿನ ಉಚ್ಚಾಟನೆಯಾಗುತ್ತ ಹೋಗುವ ದೆಂಬದು ಅತಿ ನಿಶ್ಚಿತವೆಂದು ತಿಳಿಯಿರಿ.

## ಶತ್ರು ಉಚ್ಚಾಟನ ಪ್ರಯೋಗ

ಬೇವಿನಗಿಡದ ಬೇರು ತಂದು ಉಚ್ಚಾಟನ ಮಂತ್ರದಿಂದ ಅಭಿಮಂತ್ರಿಸಬೇಕು, ಅದನ್ನು ಯಾರ ಯಾರ ಮನೆಯಲ್ಲಿ ಇಡಲಾಗುವದೋ ಅವರಲ್ಲಿ ಉಚ್ಚಾಟನೆ ಹೊಂದುವದು ಖಾತ್ರಿ ಎಂದು ತಿಳಿಯಿರಿ.

ಒಂದು ಪ್ರತಿಮೆಯನ್ನು ಸಿದ್ಧಪಡಿಸಬೇಕು, ಅದಕ್ಕೆ ಬ್ರಹ್ಮದಂಡಿ ಮತ್ತು ಚಿತಾಭಸ್ಮವನ್ನು ಲೇಪಿಸಬೇಕು, ನಂತರ ಮಂತ್ರದಿಂದ ಅಭಿಮಂತ್ರಿಸಬೇಕು, ಶನಿವಾರ ದಿವಸ ಬಿಳಿ ಸಾಸ್ವಿ ಸಹಿತ ಇದನ್ನು ಯಾರ ಮನೆಯಲ್ಲಿ ಇರಿಸಲಾಗುವದೋ ಅವರ ಉಚ್ಚಾಟನೆ ನಿಶ್ಚಿತವಾಗಿಯೂ ಆಗುವದೆಂದು ತಿಳಿಯಿರಿ.

ಬಿಳಿಸಾಸ್ವಿ ಹಾಗೂ ಶಿವನಿರ್ಮಾಲ್ಯವನ್ನು ಸೇರಿಸಿ ಒಂದು ಗಂಟನ್ನು ಕಟ್ಟಬೇಕು, ಅದನ್ನು ಉಚ್ಚಾಟನ ಮಂತ್ರದಿಂದ ಅಭಿಮಂತ್ರಿಸಬೇಕು, ಮುಂದೆ ಅದನ್ನು ಯಾರ ಮನೆಯಲ್ಲಿರಿಸಲಾಗುವದೋ ಆ ಮನೆಯಲ್ಲಿ ಸರ್ವರೂ ಉಚ್ಚಾಟನೆ ಹೊಂದುವದು ಖಾತ್ರಿ ಎಂದು ತಿಳಿಯಿರಿ.

ಹಾಲು, ತುಪ್ಪ ಹಾಗೂ ಎಳ್ಳನ್ನು ಒಂದುಗೂಡಿಸಿ ಅವುಗಳಿಂದ ಹವನವನ್ನು ಮಾಡಬೇಕು, ಗುಂಜದಬೇರನ್ನು ತಂದು ಬಿಳಿಚಂದನದೊಂದಿಗೆ ಸೇರಿಸಿ ಗಂಧವನ್ನು ಸಿದ್ಧಪಡಿಸಬೇಕು, ಅದನ್ನು ಕಪಾಳಕ್ಕೆ ಲೇಪಿಸಿಕೊಂಡು ಹೋಗಬೇಕು, ಅದರ ಮೇಲೆ ಯಾರ ದೃಷ್ಟಿಬೀಳುವದೋ ಅವರು ಉಚ್ಚಾಟನೆ ಹೊಂದುವರು. ಮತ್ತು ನಿಮ್ಮ ವಶದಲ್ಲಿ ಬರುವದು ಇದು ಸುನಿಶ್ಚಿತ ಖಾತ್ರಿ ಎಂದು ತಿಳಿಯಿರಿ.

ಅಂಜೂರಿ ಗಿಡದ ನಾಲ್ಕು ಚಕ್ಕಿಗಳನ್ನು ಉಚ್ಚಾಟನೆ ಮಂತ್ರದಿಂದ ಅಭಿಮಂತ್ರಿಸಬೇಕು, ಅದನ್ನು ಯಾರ ಶಯನ ಗೃಹದಲ್ಲಿಡುವಿರೋ ಅವರ ಉಚ್ಚಾಟನೆಯಾಗುವದೆಂದು ತಿಳಿಯಿರಿ.

## ಶತ್ರು ಉಚ್ಚಾಟನ ಯಂತ್ರ

| | | | |
|---|---|---|---|
| ಲಂ | ಲಂ | ಲಂ | ಲಂ |
| ಲಂ | ಲಂ | ಲಂ | ಲಂ |
| ಲಂ | ಲಂ | ಲಂ | ಲಂ |
| ಲಂ | ಲಂ | ಲಂ | ಲಂ |

ಈ ಯಂತ್ರವನ್ನು ಕಬ್ಬಿಣದ ಲೆಕ್ಕಣಿಕೆಯಿಂದ ತಾಮ್ರದ ತಗಡಿನ ಮೇಲೆ ಬರೆಯಬೇಕು, ವಿಧ್ಯುಕ್ತವಾಗಿ ಪೂಜಿಸಿ ಅಭಿಮಂತ್ರಿಸಿ ಯಂತ್ರ ಸಿದ್ಧಿಯನ್ನು ಪಡೆಯಬೇಕು, ಆಗ ಶತ್ರುವಿನ ಉಚ್ಚಾಟನೆಯು ನಿರಾಯಾಸವಾಗಿ ಆಗುವದೆಂಬದನ್ನು ತಿಳಿಯಿರಿ.

## ಮತ್ತೊಂದು ಯಂತ್ರ

| | | | |
|---|---|---|---|
| ೩೭ | ೭೫ | ೪ | ೯ |
| ೬ | ೯ | ೩೫ | ೪೩ |
| ೬೮ | ೬೩ | ೯ | ೮ |
| ೭ | ೫ | ೭೫ | ೪೫ |

ಈ ಯಂತ್ರವನ್ನು ಸಹ ಕಬ್ಬಿಣದ ಲೆಕ್ಕಣಿಕೆಯಿಂದ ತಾಮ್ರದತಗಡಿನ ಮೇಲೆಯೇ ಬರೆಯಬೇಕು. ವಿಧ್ಯುಕ್ತವಾಗಿ ಪೂಜಿಸಿ ಯಂತ್ರವನ್ನು ಅಭಿಮಂತ್ರಿಸಬೇಕು. ಆಗ ಯಂತ್ರಸಿದ್ಧಿಯು ದೊರೆಯುವದು. ಇದರಿಂದ ಶತ್ರುವು ಉಚ್ಚಾಟನೆಯಾದನೆಂದೇ ತಿಳಿಯಿರಿ. ಅದರಲ್ಲಿ ಯಾವಸಂಶಯವೂ ಇಲ್ಲ

## ಮಹಾಶತ್ರು ಉಚ್ಚಾಟನ ಯಂತ್ರ

| | | | |
|---|---|---|---|
| ಕಃ | ಕಃ | ಕಃ | ಕಃ |
| ಠಃ | ಠಃ | ಠಃ | ಠಃ |
| ಯಃ | ಯಃ | ಯಃ | ಯಃ |

ತುಳಸಿಯ ಕಡ್ಡಿಯನ್ನು ಲೆಕ್ಕಣಿಕೆಯನ್ನಾಗಿ ಮಾಡಿಕೊಂಡು ಅಷ್ಟಗಂಧದ ಮಸಿಯಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಅಭಿಮಂತ್ರಿಸಿದಲ್ಲಿ ಯಂತ್ರ ಸಿದ್ಧಿಯು ಪ್ರಾಪ್ತವಾಗುವದು, ತದನಂತರ ಅದನ್ನು ಬಲಭುಜಕ್ಕೆ ಕಟ್ಟಿಕೊಳ್ಳಬೇಕು ಅಂದರೆ ಕಾಡುಪ್ರಾಣಿಗಳ, ಭೂತಪ್ರೇತಗಳ ಉಚ್ಚಾಟನೆಯಾಗಿ ನಿಮಗೆ ಅವುಗಳಿಂದ ಯಾವದೇ ತರಹದ ಭೀತಿ-ಹೆದರಿಕೆಗಳು ಉಳಿಯುವದಿಲ್ಲ ಇದು ಅತಿ ನಿಶ್ಚಿತವೆಂದು ತಿಳಿಯಿರಿ.

ಇದಲ್ಲದೇ ಈ ಯಂತ್ರವನ್ನು ಎಳ್ಳಿನ ಗಿಡದ ಟೊಂಗೆಯನ್ನು ಲೆಕ್ಕಣಿಕೆಯಾಗಿ ಮಾಡಿಕೊಂಡು ಅಂಜೂರಿಯ ರಸದಿಂದ ಈ ಯಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು. ತದನಂತರ ವಿಧ್ಯುಕ್ತವಾಗಿ ಅಭಿಮಂತ್ರಿಸಿದಲ್ಲಿ ಯಂತ್ರದ ಸಿದ್ಧಿಯಾಗುವದು. ಆಗ ಅದನ್ನು ಭುಜಕ್ಕೆ ಬಂಗಾರದ ತಾಯಿತದಲ್ಲಿ ಹಾಕಿ ಕಟ್ಟಿಕೊಳ್ಳಬೇಕು. ಇದರಿಂದ ನಿಮಗೆ ಸರ್ಪದ ಹೆದರಿಕೆ ಸಹ ಉಳಿಯುವದಿಲ್ಲ.

ದಾಳಿಂಬಿಗಿಡದ ಟೊಂಗೆಯಿಂದ ಕೆಂಪು ಚಂದನವನ್ನು ಮಸಿಯಾಗಿ ಮಾಡಿಕೊಂಡು ತಾಮ್ರದ ತಗಡಿನ ಮೇಲೆ ಈ ಯಂತ್ರವನ್ನು ಬರೆಯಬೇಕು ಅದನ್ನು ದಿನಾಲು ವಿಧ್ಯುಕ್ತವಾಗಿ ಪೂಜಿಸಬೇಕು. ಅದರಿಂದ ಎಂತಹ ಕಠಿಣವಾದ ರೋಗವಿದ್ದರೂ ಸಹ ಅದು ಉಚ್ಚಾಟನೆ ಹೊಂದುವದು. ಅಲ್ಲದೇ ಮುಂದೆಂದೂ ಈ ರೋಗದ ಹೆದರಿಕೆಯು ನಿಮಗೆ ಬಾಧಿಸುವದಿಲ್ಲ.

ಅಲ್ಲದೇ ಈ ಯಂತ್ರವನ್ನು ಕಬ್ಬಿಣದ ಲೆಕ್ಕಣಿಕೆಯಿಂದ ಚಿತಾಭಸ್ಮವನ್ನು ಮಸಿಯಾಗಿ ಮಾಡಿಕೊಂಡು ದೀಪಾವಳಿಯ ದಿವಸದಂದು ಅವೆಯ

ಬೆನ್ನಿನ ಮೇಲೆ ಬರೆಯಬೇಕು. ಅದನ್ನು ವಿಧಿಪೂರ್ವಕವಾಗಿ ಪೂಜಿಸಿ ಅಭಿಮಂತ್ರಿಸಿದಲ್ಲಿ ಯಂತ್ರದ ಸಿದ್ಧಿಯು ಪ್ರಾಪ್ತವಾಗುವದು. ಆಗ ನಿಮ್ಮ ಮಹಾಶತ್ರುಗಳ ಸಂಪೂರ್ಣ ಉಚ್ಚಾಟನೆಯಾಗಿ ನಿಮಗೆ ಯಾವದೇ ತರಹದ ಭೀತಿ ಉಳಿಯುವದಿಲ್ಲ ಮತ್ತು ಬಾಧೆಯಾಗುವದಿಲ್ಲ. ಇದು ಅತಿ ನಿಶ್ಚಿತವೆಂದು ತಿಳಿದುಕೊಳ್ಳಿರಿ.

## ಸರ್ವ ಉಚ್ಚಾಟನ ಯಂತ್ರ

| | |
|---|---|
| ಓಂ | ಗಣಪತಿ ಪ್ರತಿ ಹಂ |
| ಹ್ರಂ | ಗ್ಯೈ ಡೇವದತ್ತಃ |
| ಹ್ರಂ | ಗಂಧಂ ಸ್ವಾಹಾ |

ವದ್ಯಪಕ್ಷದ ಚತುರ್ದಶಿಯೆಂದು ಮಧ್ಯರಾತ್ರಿಯ ಕಾಲದಲ್ಲಿ ಕೆಂಪು ವಸ್ತ್ರವನ್ನು ಧರಿಸಿ ಕೆಂಪು ಚಂದನ ತಿಲಕವನ್ನು ಹಚ್ಚಿಕೊಂಡು ಕೆಂಪು ಹೂವಿನ ಮಾಲೆಯನ್ನು ಕೊರಳಲ್ಲಿ ಧರಿಸಿಕೊಂಡು ಶರೀರಕ್ಕೆಲ್ಲ ಕೆಂಪು ಚಂದನವನ್ನು ಲೇಪಿಸಿಕೊಂಡು ಯಾವದಾದರೂ ವ್ಯಕ್ತಿಯ ರಕ್ತದಿಂದ ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಕೆಂಪು ಹೂಗಳಿಂದ ಅದನ್ನು ಪೂಜಿಸಬೇಕು ಬಡಬಗ್ಗರಿಗೆ ಅನ್ನಸಂತರ್ಪಣೆಯನ್ನು ಮಾಡಬೇಕು. ನಂತರ ಈ ಯಂತ್ರವನ್ನು ಸಣ್ಣ ಸಣ್ಣ ತುಣುಕುಗಳನ್ನಾಗಿ ಮಾಡಬೇಕು. ಅದನ್ನು ಅನ್ನದಲ್ಲಿ ಕೂಡಿಸಿ ಸ್ಮಶಾನಕ್ಕೆ ಒಯ್ದು ಕಾಗೆಗಳಿಗೆ ಅದರ ಬಲಿಯನ್ನು ಕೊಡಬೇಕು. ಈ ಯಂತ್ರವು ಸಿದ್ಧಿಯನ್ನು ಪಡೆದ ನಂತರ ಮನಸ್ಸಿನಲ್ಲಿ ಯಾವ ವ್ಯಕ್ತಿಯ ಹೆಸರನ್ನು ತೆಗೆದುಕೊಳ್ಳುವಿರೋ ಅವರ ಉಚ್ಚಾಟನೆಯಾಗುವದು ಅತ್ಯಂತ ಖಾತ್ರಿ ಎಂದು ತಿಳಿಯಬೇಕು.

## ಶತ್ರು ಉಚ್ಚಾಟನ ಯಂತ್ರ

| | | | |
|---|---|---|---|
| ತಂ | ತಂ | ತಂ | ತಂ |
| ತಂ | ತಂ | ತಂ | ತಂ |
| ತಂ | ತಂ | ತಂ | ತಂ |
| ತಂ | ತಂ | ತಂ | ತಂ |

ಸ್ಮಶಾನದಲ್ಲಿಯ ಅವಶೇಷವನ್ನು ತಂದು ಶತ್ರುವು ಮೈಮೇಲೆ ಉಪಯೋಗಿಸುವ ಬಟ್ಟೆಯನ್ನು ದೊರಕಿಸಿ ಅದರಿಂದ ಆ ಬಟ್ಟೆಯ ಮೇಲೆ ಈ ಯಂತ್ರವನ್ನು ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಅಭಿಮಂತ್ರಿಸಬೇಕು ಆಗ ಯಂತ್ರದಲ್ಲಿ ಸಿದ್ಧಿಯು ಪ್ರಾಪ್ತವಾಗುವದು. ಅಂದರೆ ನಿಮ್ಮ ಶತ್ರುವಿನ ಪೂರ್ಣ ಉಚ್ಚಾಟನೆಯಾಗುವದರಲ್ಲಿ ಯಾವದೇ ರೀತಿಯ ಸಂದೇಹವಿಲ್ಲವೆಂದು ತಿಳಿಯಿರಿ.

## ಮಧ್ಯಪ್ರೇಮಿ ಉಚ್ಚಾಟನ ಯಂತ್ರ

| | | |
|---|---|---|
| ಕ್ರೀಂ | ಕ್ರೀಂ | ಕ್ರೀಂ |
| ಆ | ೨೨ | ರ್ಷ |
| ಕ್ರೀಂ | ಯ | ಕ್ರೀಂ |
| ಹೆಸರು | | |

ಈ ಯಂತ್ರವನ್ನು ಚಿನ್ನದ ತಗಡಿನ ಮೇಲೆ ಹಳದಿಮಸಿಯಿಂದ ಬರೆಯಬೇಕು ಆಲಿವ್‌ಗಿಡದ ಟೊಂಗೆಯನ್ನು ಈಯಂತ್ರ ಬರೆಯಲು ಲೆಕ್ಕಣಿಗೆಯಾಗಿ ಉಪಯೋಗಿಸಬೇಕು. ಕೆಳಗೆ ಹೆಸರು ಎಂದಿರುವಲ್ಲಿ ನಿಮ್ಮ ಹಾಗೂ ಪ್ರೇಯುಸಿಯ ಮಧ್ಯದಲ್ಲಿ ಬರಬಹುದಾದ ಶತ್ರುವಿನ ಹೆಸರನ್ನು ಬರೆಯಬೇಕು. ಇದನ್ನು ಪ್ರತಿದಿನವೂ ವಿಧಿಪೂರ್ವಕವಾಗಿ ಪೂಜಿಸುತ್ತ ಹೋಗಬೇಕು. ಆಗ ಈ ಯಂತ್ರದ ಸಿದ್ಧಿಯು ಪ್ರಾಪ್ತವಾಗುವದು. ತದನಂತರ ನಿಮ್ಮ ಹಾಗೂ ನಿಮ್ಮ ಪ್ರೇಯುಸಿಯ ಮಧ್ಯದಲ್ಲಿ ಯಾರೇ ಇರಲಿ ಅವರು

ಬೇಗನೆ ಉಚ್ಚಾಟನೆಯನ್ನು ಹೊಂದುವದಲ್ಲದೇ ನಿಮ್ಮಿಬ್ಬರ ಪ್ರೇಮವು ದೃಢವಾಗುವದರಲ್ಲಿ ಯಾವದೇ ತರದ ಅಡ್ಡಿ ಆಡಚಣೆಗಳು ಉಳಿಯುವದಿಲ್ಲವೆಂಮ ತಿಳಿದುಕೊಳ್ಳಬೇಕು.

## ಇನ್ನೊಂದು ಶತ್ರು ಉಚ್ಚಾಟನ ಯಂತ್ರ




ಈ ಮಂತ್ರವನ್ನು ಸಾಸ್ವಿಎಲೆಯ ಮೇಲೆ ಯಾವದಾದರೂ ಗಿಡದ ರಸದಿಂದ ಬರೆಯಬೇಕು. ಅದನ್ನು ಮಾಡಲು ವಿಧ್ಯುಕ್ತವಾಗಿ ಪೂಜಿಸಬೇಕು. ಯಂತ್ರದಲ್ಲಿ ಹೆಸರು ಎಂದಿಲ್ಲ ನೀವು ಉಚ್ಚಾಟನೆ ಮಾಡಬೇಕೆಂದಿರುವ ಶತ್ರುವಿನ ಹೆಸರನ್ನು ಬರೆಯಿರಿ. ನಂತರ ಈ ಯಂತ್ರವನ್ನು ಕತ್ತೆಯ ಮೂತ್ರದಲ್ಲಿ ಎದ್ದಿರಿ. ಅಂದರೆ ನಿಮ್ಮ ಶತ್ರುವು ಸಂಪೂರ್ಣವಾಗಿ ಉಚ್ಚಾಟನೆ ಹೊಂದುವದರಲ್ಲಿ ಯಾವ ಸಂದೇಹವೂ ಇಲ್ಲ.

## ಮಾರಣ ಕರ್ಮ ಸಾಧನೆಯು

ಸರ್ವ ಸಾಮಾನ್ಯವಾಗಿ ದುಸ್ಸಾಧ್ಯವಾಗಿರುವ ಪ್ರಾಣಹರಣವು ಮಾರಣ ಕರ್ಮದಿಂದ ಸುಲಭ ಸಾಧ್ಯವಾಗಿರುವದು, ಆದರೆ ಇದನ್ನು ಪ್ರಯೋಗಿಸುವಾಗ ಅತ್ಯಂತ ಜಾಗರೂಕರಾಗಿರುವದು ಅವಶ್ಯವಿರುವದು. ತಾವು ಸ್ವತಃ ಪ್ರಾಣಾಪಾಯದಲ್ಲಿ ಸಿಲುಕಿದಾಗ ಸಜ್ಜನರು ದುರ್ಜನರಿಂದ ಪ್ರಾಣಾಪಾಯಕ್ಕೊಳಗಾದಾಗ ಇಲ್ಲವೇ ಯಾವದಾದರೂ ಸ್ತ್ರೀ ದುರ್ಜನರ ಮೋಸಕ್ಕೊಳಗಾಗಿ ಪ್ರಾಣಕ್ಕೆರವಾಗುವ ಪ್ರಸಂಗವಿರುವಾಗ ಮಾತ್ರ ಮಾರಣ ಕರ್ಮದ ಪ್ರಯೋಗವನ್ನು ಮಾಡಿಕೊಳ್ಳಬೇಕಾಗುವದು. ಈ ಪ್ರಯೋಗವನ್ನು ಮಾಡುವಾಗ ಬಹಳಷ್ಟು ಜಪಮಾಡಬೇಕಲ್ಲದೇ ವಿಧ್ಯುಕ್ತವಾಗಿ ಪ್ರಯೋಗ ಕಾರ್ಯವನ್ನು ನಡೆಸಬೇಕಾಗುವದು. ಏನಾದರೂ ಸ್ವಲ್ಪ ತಪ್ಪಾದರೂ ಅದು ಸಾಧಕನ ಮೇಲೆಯೇ ದುಷ್ಪರಿಣಾಮವನ್ನುಂಟು ಮಾಡುವ ಸಂಭವವಿರುವದು. ಅಂದರೆ ಅತ್ಯಂತ ಅವಶ್ಯಕವಾದ ಪ್ರಸಂಗಗಳಲ್ಲಿ ಮಾತ್ರ ಈ ಸಾಧನದ ಉಪಯೋಗವನ್ನು ಮಾಡಿಕೊಳ್ಳಬೇಕೆಂಬದನ್ನು ಮರೆಯಬಾರದು. ಸ್ವಾರ್ಥಕ್ಕಾಗಿ ಪಾಪ ದೃಷ್ಟಿಯಿಂದ ಮತ್ತು ದ್ವೇಷ ದೃಷ್ಟಿಯಿಂದ ಈ ಸಾಧನೆಯನ್ನುಪಯೋಗಿಸಿಕೊಂಡಲ್ಲಿ ಅವರಿಗೆ ಅದರಿಂದ ಮಹಾದೋಷವು ತಗಲುವದಲ್ಲದೇ ಸಾಧಕನು ಮಹಾಪಾಪಿ ಎನಿಸುವನೆಂಬದನ್ನು ನೆನಪಿನಲ್ಲಿರಿಸಿಕೊಳ್ಳಬೇಕು.

ಓಂ ಫಟ್ ಸ್ವಾಹಾ ಎಂಬದು ಮಾರಣಕರ್ಮದ ಪ್ರಯೋಗದ ಬೀಜ ಮಂತ್ರವಾಗಿರುವದು. ಇದರ ಸಿದ್ದಿಯನ್ನು ಪಡೆಯಬೇಕಾದಲ್ಲಿ ಬಹು ವಿಧಿ ಪೂರ್ವಕವಾಗಿ ಸಾಧನೆಯನ್ನು ಪೂರ್ಣ ಮಾಡಬೇಕಾಗುವದು. ಹದಿನಾಲ್ಕು ಸಾವಿರ ಸಲ ಈ ಮಂತ್ರ ಜಪಿಸಿದಲ್ಲಿ ಮತ್ತು ಹೋಮ ಹವನಗಳನ್ನು ವಿಧ್ಯುಕ್ತವಾಗಿ ಮಾಡಿಕೊಂಡಲ್ಲಿ ಸಿದ್ದಿಯುಂಟಾಗುವದು. ಮುಂದೆ

ಪ್ರಯೋಗದ ಕಾಲದಲ್ಲಿ ಮೇಲಿನ ಮಂತ್ರದಿಂದ ೧೦೮ ಸಲ ಜಪಿಸಿದಲ್ಲಿ ಮತ್ತು ಪ್ರಯೋಗವನ್ನು ಅಭಿಮಂತ್ರಿಸಿದಲ್ಲಿ ಇಚ್ಛಿತ ಸಿದ್ಧಿಯು ದೊರೆಯುವದೆಂಬದನ್ನು ಲಕ್ಷಿಸಬೇಕು.

## ಮಾರಣಸಿದ್ಧಿ ಮಂತ್ರ

ಓಂ ನಮೋ ಕಾಲ ರೂಪಾಯ ಶತ್ರುಬಸ್ಮೊ ಕುರು ಕುರು ಸ್ವಾಹಾ।

ವಿಧಿಪೂರ್ವಕವಾಗಿ ಈ ಮಂತ್ರವನ್ನು ಒಂದುಲಕ್ಷ ಸಲ ಜಪಿಸಿದಲ್ಲಿ ಸಿದ್ಧಿಯು ದೊರೆಯುವದು. ಇದು ಕಾರ್‍ಯಸಿದ್ಧಿಯ ಮಂತ್ರವಾಗಿರುವದರಿಂದ ಯಾವದಾದರೂ ಪ್ರಯೋಗ ಕಾಲದಲ್ಲಿ ಅಭಿಮಂತ್ರಿಸುವಾಗ ೧೦೮ ಸಲ ಜಪಿಸಿದಲ್ಲಿ ಕಾರ್‍ಯವು ಸಿದ್ಧಿಸುವದೆಂದು ತಿಳಿಯಿರಿ.

## ಶತ್ರುಮಾರಣ ಮಂತ್ರ

ಓಂ ನಮೋ ಸರ್ವಕಾಲ ಸಂಹಾರಾಯ (ಅಮುಕ)
ಹನಹನ ಕ್ರಿಂ ಹ್ರೂಂ ಫಟ್ । ಭಸ್ಮ ಕುರು ಕುರು ಸ್ವಾಹಾ॥

ಯಾವ ವ್ಯಕ್ತಿಯ ಮೇಲೆ ಮಾರಣದ ಪ್ರಯೋಗವನ್ನು ನೀವು ನಡೆಸಬೇಕಾಗಿದೆಯೋ ಆ ವ್ಯಕ್ತಿಯ ಹೆಸರನ್ನು ಅಮುಕ ಎಂಬಲ್ಲಿ ಸೇರಿಸಿಕೊಳ್ಳಬೇಕು. ಇದನ್ನು ಪ್ರಯೋಗಿಸುವ ಕಾಲದಲ್ಲಿ ೧೦೮ ಸಲ ಮೇಲಿನ ಮಂತ್ರ ಜಪಿಸಿ ಅಭಿಮಂತ್ರಿಸಬೇಕು. ಆಗ ಸಿದ್ಧಿಯು ಪ್ರಾಪ್ತವಾಗುವದೆಂಬದನ್ನು ಲಕ್ಷಿಸಬೇಕು. ಅಭಿಮಂತ್ರದ ಮೊದಲು ೧೦ ಸಾವಿರ ಸಲ ಮೇಲಿನಮಂತ್ರವನ್ನು ಜಪಿಸಬೇಕು.

## ಇನ್ನೊಂದು ಮಂತ್ರ

ಓಂ ನಮೋ ಭಗವತೆ ಭೂತಾದಿಪತಯೆ ವಿರೂಪಾಕ್ಷಾಯ
ಘೋರ ದಂಷ್ಟ್ರಿನೆ ವಿಕಾರಾಲಿನೆ ಗ್ರಹೂಯಕ್ಷ ಭೂತೇನಾನನ
ಶ್ರೀ ಶಂಕರ (ಅಮುಕಮ್) ಹನಹನ ದಹದಹ ಪಚಪಚ

ಗ್ರಹಣ ಗ್ರಹಣ ಹ್ರೂಂ ಫಟ್ ಠಃ ಠಃ

ಮೊದಲು ೧೦ಸಾವಿರ ಸಲ ಈ ಮಂತ್ರವನ್ನು ಜಪಿಸಿದಲ್ಲಿ ಮಂತ್ರ ಸಿದ್ಧಿಯು ದೊರೆಯುವದು, ಅಮುಕಮ್ ಎಂಬಲ್ಲಿ ನೀವು ಯಾವ ವ್ಯಕ್ತಿಯ ಮೇಲೆ ಮಾರಣ ಪ್ರಯೋಗ ನಡೆಸಬೇಕೆಂದು ಬಯಸುತ್ತಿರುವಿರೋ ಅವರ ಹೆಸರನ್ನು ಸೇರಿಸಬೇಕು, ಪ್ರಯೋಗವನ್ನು ಅಭಿಮಂತ್ರಿಸುವಾಗ ೧೦೮ ಸಲ ಜಪಿಸಬೇಕು.

## ಮತ್ತೊಂದು ಮಂತ್ರ

ಓಂ ಏಂ ಹ್ರೀಂ ಮಹಾ ಮಹಾವಿಕಾರಾಲ ಭೈರವ ಜ್ವಲತ್ ಕಾಯ
ಮಮ ಶತ್ರುಂ ದಹದಹ ಹನಹನಹನ ಪಚಪಚಪಚ
ಯಂ ಮೂಲಯ ಓಂ ಹ್ರಾಂ ಹ್ರೀಂ ಹ್ರೂಂ ಫಟ್ ಸ್ವಾಹಾ।

ಸ್ಮಶಾನಭೂಮಿಯಲ್ಲಿ ಕೋಣದ ಚರ್ಮದ ಆಸನದ ಮೇಲೆ ಕೂತು ಕೊಂಡು ಈ ಮಂತ್ರವನ್ನು ೧೦೮ ಸಲ ಜಪಿಸಬೇಕು, ತದನತರ ಒಂದೂ ಕಾಲು ಸೇರು ಸಾಸುವೆಯ ಹವನ ಮಾಡಬೇಕು, ಏಳುದಿನಗಳ ವರೆಗೆರಾತ್ರಿ ಹೀಗೆ ಮಾಡಲಾಗಿ ನಿಮ್ಮ ಶತ್ರುವು ನಿಶ್ಚಿತವಾಗಿಯೂ ನಾಶಹೊಂದುವ ನೆಂದು ತಿಳಿಯಿರಿ.

## ಮತ್ತೊಂದು ಶತ್ರು ಮಾರಣ ಮಂತ್ರ

ಓಂ ನಮಃ ಕಾಲರೂಪಾಯ ಶತ್ರು ಭಸ್ಮಿ ಕುರು ಕುರು ಸ್ವಾಹಾ।

ಮೊದಲು ಈ ಮಂತ್ರವನ್ನು ಒಂದುಲಕ್ಷ ಸಲ ಜಪಿಸಿದಲ್ಲಿ ಮಂತ್ರ ಸಿದ್ಧಿಯು ದೊರೆಯುವದು. ತದನಂತರ ಪ್ರಯೋಗ ಸಮಯದಲ್ಲಿ ನೂರಾ ಎಂಟು ಸಲ ಜಪಿಸಬೇಕು, ಜಪ ಮಾಡುವ ಕಾಲಕ್ಕೆ ಶತ್ರು ಎಂದಿರುವ ಭಾಗದಲ್ಲಿ ಯಾರ ಮೇಲೆ ಪ್ರಯೋಗ ಮಾಡಬೇಕಾಗಿರುವದೋ ಅವರ ಹೆಸ ರನ್ನು ತೆಗೆದುಕೊಳ್ಳಬೇಕು, ಅದರಿಂದ ನಿಮ್ಮ ಶತ್ರುವು ನಾಶಹೊಂದುವದ ರಲ್ಲಿ ಸಂದೇಹವಿಲ್ಲ.

## ಅಶ್ವಮಾರಣ ಮಂತ್ರ

ಓಂ ಪಚಪಚ ಸ್ವಾಹಾ

ಅಶ್ವಿನಿ ನಕ್ಷತ್ರದ ದಿನವನ್ನು ಸಾಧಿಸಿಕೊಂಡು ಅಮಾವಾಸ್ಯೆಯ ದಿನ ರವಿವಾರ ದಿವಸದಂದು ಅಶ್ವಶಾಲೆಯಲ್ಲಿ ಮಂತ್ರವನ್ನು ಉಚ್ಚರಿಸಿದಲ್ಲಿ ಆ ಅಶ್ವಶಾಲೆಯಲ್ಲಿರುವ ಕುದುರೆಗಳೆಲ್ಲ ನಷ್ಟವಾಗಿ ಹೋಗುವವು.

## ಭೈರವ ಮಂತ್ರ

ಓಂ ನಮೋ ಭಗವತೆ ಮಹಾಕಾಲ ಭೈರವಾಯ
ಕಾಲಾಗ್ನಿ ತೇಜಸೆ (ಅಮುಕಂ) ಭೀಷತ್
ಮಾರಯ ಮಾರಯ ಪೋಥಯಪೋಥಯ ಹೂಂ ಫಟ್ ಸ್ವಾಹಾ/

ಇಪ್ಪತ್ತೊಂದು ದಿನಗಳ ವರೆಗೆ ಪ್ರತಿದಿನ ಹತ್ತುಸಾವಿರ ಸಲ ಈ ಮಂತ್ರವನ್ನು ಜಪಿಸಬೇಕು, ಮಂತ್ರಸಿದ್ಧಿಯಾಗಿ ಮಹಾಕಾಲ ಭೈರವನು ನಿಮಗೆ ಪ್ರಸನ್ನನಾಗುವನು, ಅವನಿಂದ ನಿಮ್ಮ ಕಾರ್ಯಸಿದ್ಧಿಯೂ ಆಗುವದು, ಆದರೆ ಈ ಮಂತ್ರ ಸಿದ್ಧಿಯನ್ನು ಪಡೆಯಲು ಬಹು ಸಾವಧಾನದಿಂದ ಹಾಗು ವಿಧಿಪೂರ್ವಕವಾಗಿ ನಡೆಯುವದು ವಶ್ಯವೆಂಬುದನ್ನು ತಿಳಿಯಿರಿ.

## ಮಹಾಕಾಲಿ ಮಾತಾಕವಚ

ಓಂ ಅಸ್ಯ ಶ್ರೀ ಕಾಲಿಕಾ ಕವಚಸ್ಯ ಭೈರವ
ಋಷಿರ್ಗಾಯತ್ರಿ ಛಂದಃ ಶ್ರೀ ಕಾಲಿಕಾ ದೇವತಾ
ಸದ್ಯಃ ವೈರಿ ಸಂಘನಾಶೋ ವಿನಿಯೋಗಃ

ಸ್ನಾನ ಮಾಡಿ ಶುಚಿರ್ಭೂತರಾಗಿ ಕೈಯಲ್ಲಿ ನೀರು ತೆಗೆದುಕೊಂಡು ಮೇಲಿನ ಮಂತ್ರವನ್ನು ಉಚ್ಚರಿಸುತ್ತ ಏಳುಸಲ ಅರ್ಘ್ಯವನ್ನು ಕೊಡಬೇಕು ನಂತರ ಎಷ್ಟು ಸಾಧ್ಯವಿರುವದೋ ಅಷ್ಟು ಕಾಲಿಮಾತೆಯ ಧ್ಯಾನವನ್ನು ಮಾಡಬೇಕು, ತದನಂತರ ಕಾಲಿಮಾತೆಯ ಅಕರಾಳ ವಿಕರಾಳ ಮೂರ್ತಿ

ಯನ್ನು ಕಲ್ಪನೆಯಿಂದ ಕಣ್ಣು ಮುಂದೆ ತಂದುಕೊಳ್ಳಬೇಕು. ಮುಂದೆ ಈ ಕೆಳಗೆ ಬರೆದಿರುವ ಕವಚ ಮಂತ್ರವನ್ನು ಅನ್ನುತ್ತ ಹೋಗಬೇಕು.

ಓಂ ಕಾಲಿಕಾ ಘೋರರೂಪಾದ್ಯಾ ಸರ್ವನಾಮಪ್ರದಾ ಶುಭಾ|
ಸರ್ವದೇವಸ್ತುತಾದೇವಿ ಶತ್ರುನಾಶಂ ಕರೋತುತೆ
ಹ್ರೀಂ ಹ್ರೀಂ ಸ್ವರೂಪಿಣಿ ಚೈವ|
ಹ್ರೀಂ ಹ್ರೀಂ ಹ್ರೀಂ ಸಂಗಿನಿ ತಥಾ|
ಹ್ರೀಂ ಹ್ರೀಂ ಕ್ಷಾಂ ಕ್ಷೌಂ ಸ್ವರೂಪಾಸಾ ಸರ್ವದಾ ಶತ್ರುನಾಶಿನಿ|
ಶ್ರೀ ಹ್ರೀಂ ವೂಮ್ ರೂಪಿಣಿದೇವಿ ಭವಬಂಧ ವಿಮೋಚಿನಿ|
ಯಥಾ ಶತ್ರುರ್ಹತೊ ದೈತ್ಯೋ ನಿಂಶ್ಯು ಭಕ್ಷ್ಯಶ್ಚ ಹಾಸುರಃ|
ವೈರಿ ನಾಶಾಯುಂ ವಂದಿತಾಂ!
ಕಾಲಿಕಾಂ ಶಂಕರ ಪ್ರಿಯಾವ್|
ಬ್ರಾಹ್ಮಿ ಶೈವಿ ವೈಷ್ಣವಿ ವಾರಾಹಿ ನೃಸಿಂಹಿಕಾ ಕೌಮಾರಿ
ಶ್ರೀ ಚಾಮುಂಡಾ ಖಾರತುಮಮ ದ್ವಿಷಿತಃ
ಸುರೇಶ್ವರಿ ಘೋರರೂಪಾ ಚಂಡಮುಂಡ ವಿನಾಶಿನಿ|
ಮುಂಡಮಾಲಾ ವೃತಾಂಗಿಯ ಸವತಃ ಪಾತುಮಾಮ್ ಸದಾ|
ಹ್ರೀಂ ಹ್ರೀಂ ಕಾಲಿಕೆ ಘೋರದಂಷ್ಟ್ರೆ ರುಧಿರಪ್ರಿಯೆ ರುಧಿರ
ಪೂರ್ಣ ವಕ್ತ್ರೆ ಚ|
ಸಾಧಿರಾಃ ವಿತಿಸ್ತಿನಃ|
ಮಮ ಶತ್ರೂನ್ ಖಾದಯ ಖಾದಯ|
ಹಿಂಸಯ ಹಿಂಸಯ|
ಮಾರಯ ಮಾರಯ
ಘಿಂ ಘಿಂ ಘಿಂ ಘಿಂ|
ಛಿಂದಿ ಛಿಂದಿ|
ಉಚ್ಚಾಟಯ ಉಚ್ಚಾಟಯ|
ದ್ರಾವಯ ದ್ರಾವಯ|
ಶೋಷಯ ಶೋಷಯ|
ಯಾ ತು ಧ್ಯಾತಿ ಚಾಮುಂಡೆ|

ಹರಾ ಹರಿ ಬ್ರಾಂ ಬ್ರಿ ಕ್ರಾಮಿ ಕ್ರಾಯ್ಯೈ।
ಸರ್ವ ಶತ್ರೂನ್ ಸಮರ್ಪಯಾಮಿ। ಸ್ವಾಹಾ।
ಕಿಟಕಿಟ ಕಿರಕಿರ ಕಟುಕಟು ಮರ್ದಯ ಮರ್ದಯ ಮೋಹಯ ಮೋಹಯ
ಹರಹರ ಮಮ ರಿಪೂನ್ ಧ್ವಂಸಯ ಧ್ವಂಸಯ।
ಭಕ್ಷಯ ಭಕ್ಷಯ।
ತ್ರೋಟಕ ತ್ರೋಟಕ।
ಯಾತುಧಾನಿಕಾ ಚಾಮುಂಡಾ।
ಸರ್ವಜನಾನ್ ರಾಜಪುರುಷಾಯ ರಾಜಾಶ್ರಯನಮ್ ಯೆ ದೇಹಿ ದೇಹಿ ನೂತನ ಧಾನ್ಯಂ ಜಯಕ್ಷ ಜಯಕ್ಷ ಕ್ರಾಂ ಕ್ರಾಂ ಕ್ಷಮ್।
ಕ್ಷ್ರೈಂ ಕ್ಷ್ರೈಂ ಕ್ಷಃ ಸ್ವಾಹಾ। ಇತಿ ಕವಚಮ್.

ಈ ಕಾಲಿಕವಚವು ಬಹು ಮಹಾತ್ಮೆಗಳಿಂದ ಕೂಡಿದ್ದಾಗಿದೆ. ಭಕ್ತಿಪೂರ್ವಕವಾಗಿ ಯಾರು ಇದನ್ನು ಪಠಿಸುವರೋ ಅವರ ಶತ್ರುಗಳು ಸಮೂಲನಾಶ ಹೊಂದುವರು. ಒಂದು ಸಾವಿರ ಸಲ ಪಠಿಸಿದ ನಂತರ ಈ ಕವಚ ಸಿದ್ಧಿ ಮತ್ತು ಕಾರ್ಯಸಿದ್ಧಿ ದೊರೆಯುವದು. ಮುಂಜಾನೆ ಹಾಗೂ ಸಾಯಂಕಾಲ ಇದನ್ನು ಪಠಿಸುತ್ತ ಹೋದಲ್ಲಿ ಸಿದ್ಧಿಯು ಚಿರಕಾಲ ಉಳಿಯುವದು.

ಶತ್ರುವಿನ ಮೇಲೆ ಪ್ರಯೋಗಿಸುವಾಗ ಅನುಸರಿಸುವ ಪದ್ಧತಿಯಿದು. ಚಿತಾಭಸ್ಮ ತಂದು ಕೈಕಾಲು ತೊಳೆದ ನೀರಿನಲ್ಲಿ ಅದನ್ನು ಸೇರಿಸಿ ಅದರ ಮಸಿಯನ್ನು ಸಿದ್ಧಪಡಿಸಿ ಅದರಿಂದ ಈ ಕವಚವನ್ನು ಬರೆಯಬೇಕು. ಭೂಮಿಯ ಮೇಲೆ ಶತ್ರುವಿನ ಒಂದು ಮೂರ್ತಿಯನ್ನು ಸಿದ್ಧಮಾಡಿಡಬೇಕು ಆ ಮೂರ್ತಿಯ ಹೃದಯದ ಮೇಲೆ ನಿಮ್ಮ ಕೈಯನ್ನಿರಿಸಿ ಈ ಕವಚದ ಪಠಣ ಮಾಡಬೇಕು. ಈ ರೀತಿ ಆ ಮೂರ್ತಿಯಲ್ಲಿ ಪ್ರಾಣಪ್ರತಿಷ್ಠೆಯುಂಟು ಮಾಡಬೇಕು. ನಂತರ ಒಂದು ಚೂರಿಯಿಂದ ಆ ಮೂರ್ತಿಯ ರುಂಡ ಮುಂಡ ಬೇರೆ ಮಾಡಬೇಕು. ಈ ಪ್ರಕಾರ ನೀವು ಸಾಧನೆ ಮಾಡುತ್ತ ಹೋಗುವದರಿಂದ ನಿಮ್ಮ ಶತ್ರುವು ಸ್ವಲ್ಪಸ್ವಲ್ಪವಾಗಿ ನಾಶವಾಗುತ್ತ ಹೋಗುವನು, ಅವನಿಗೆ ದುಃಖ ಪ್ರಾಪ್ತಿಯಾಗುವದು, ಜಡ್ಡಾಗ ತೊಡಗುವನು;

ಮಕ್ಕಳು ಮರಿಗಳು ನಾಶವಾಗುವರು, ಸಂಪತ್ತು ಸಹ ನಾಶವಾಗತೊಡಗುವದು, ಕೊನೆಯಲ್ಲಿ ಅವನು ಸಹ ಮೃತ್ಯುವಶನಾಗುವನೆಂದು ತಿಳಿಯಿರಿ.

ಆದರೆ ಸಾಧಕನಿಗೆ ಮಾತ್ರ ಧನ, ಧಾನ್ಯ, ಮಕ್ಕಳು–ಮರಿ ಪ್ರಾಪ್ತವಾಗುವರು, ದಿನದಿನಕ್ಕೆ ಅವನ ಉನ್ನತಿಯಾಗುತ್ತ ಹೋಗುವದು.

## ಶತ್ರುಮಾರಣ ಪ್ರಯೋಗ

ಚಿತಾಭಸ್ಮವನ್ನು ತರಬೇಕು, ಅದನ್ನು ಧತ್ತೂರಿಬೀಜದ ಚೂರ್ಣದಲ್ಲಿ ಸೇರಿಸಬೇಕು, ಈ ಮಿಶ್ರಣವನ್ನು ಅಭಿಮಂತ್ರಿಸಿ ಸಿದ್ಧಿಗೊಳಿಸಬೇಕು, ಮಂಗಳವಾರ ದಿವಸ ಈ ಮಿಶ್ರಣವನ್ನು ಯಾರ ತಲೆಯ ಮೇಲೆ ನೀವು ಹಾಕುವಿರೋ ಅವರು ಅತ್ಯವಶ್ಯವಾಗಿ ಸಾವನ್ನಪ್ಪುವರೆಂದು ಭಾವಿಸಿರಿ.

ಮಂಗಳವಾರ ದಿವಸ ಭರಣಿ ನಕ್ಷತ್ರವಿರುವ ಯೋಗವನ್ನು ಕಂಡುಹಿಡಿಯಬೇಕು. ಅಂದು ಮಧ್ಯರಾತ್ರಿ ಕಾಲದಲ್ಲಿ ಸ್ಮಶಾನಕ್ಕೆ ಹೋಗಿ ಚಿತಾಗ್ನಿಯಲ್ಲಿ ಅರ್ಧಮರ್ಧ ಸುಟ್ಟು ಉಳಿದಿರುವ ಕಟ್ಟಿಗೆಯನ್ನು ತರಬೇಕು ಅದನ್ನು ಮಾರಣ ಮಂತ್ರದಿಂದ ಅಭಿಮಂತ್ರಿಸಬೇಕು, ಈ ಕಟ್ಟಿಗೆಯನ್ನು ನೀವು ಯಾವ ಶತ್ರುವಿನ ಮೇಲೆ ಈ ಪ್ರಯೋಗವನ್ನು ಕೈಕೊಳ್ಳಬೇಕೆಂದು ಇಚ್ಛಿಸುವಿರೋ ಆ ಶತ್ರುವಿನ ಮನೆ ಬಾಗಿಲೆದುರು ಇಟ್ಟು ಬರಬೇಕು, ಆಗ ಶತ್ರುವಿನ ನಾಶವಾಗುವದು, ಅಂದರೆ ಅವನು ಮೃತ್ಯುವಶನಾಗುವನೆಂದು ಭಾವಿಸಿರಿ.

ಕೃಷ್ಣ ಸರ್ಪದ ಚರಬಿ ಮತ್ತು ಧತ್ತೂರಿಬೀಜದ ಎಣ್ಣೆಯನ್ನು ಸೇರಿಸಿ ಒಂದುಗೂಡಿಸಬೇಕು, ರಾತ್ರಿ ಕಾಲದಲ್ಲಿ ಮನುಷ್ಯನ ತಲೆಬುರುಡೆಯಲ್ಲಿ ಈ ಎಣ್ಣೆಯಿಂದ ದೀಪವನ್ನು ಉರಿಸಬೇಕು, ಅದರ ಕಾಡಿಗೆಯನ್ನು ಹಿಡಿದಿಟ್ಟುಕೊಳ್ಳಬೇಕು, ಈ ಕಾಡಿಗೆ, ಚಿತೆಯಭಸ್ಮ ಮತ್ತು ಪಂಚಲವಣಗಳನ್ನು ಸೇರಿಸಿ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು, ಈ ಮಿಶ್ರಣವನ್ನು ಅಭಿಮಂತ್ರಿಸಬೇಕು, ತದನಂತರ ಯಾವ ಶತ್ರುವಿನ ತಲೆಯ ಮೇಲೆ ಈ ಮಿಶ್ರಣ ಹಾಕುವಿರೋ ಅವನು ಅತ್ಯಂತ ನಿಶ್ಚಿತವಾಗಿಯೂ ಸಾವಿಗೊಳಗಾಗುವನೆಂದು ಭಾವಿಸಿರಿ.

ಕತ್ತೆಯ ಲದ್ದಿ ಮತ್ತು ವಿಷವನ್ನು ಒಂದುಗೂಡಿಸಿ ಅದರ ಮಿಶ್ರಣವನ್ನು ಸಿದ್ಧಪಡಿಸಬೇಕು, ಅದನ್ನು ಮಾರಣ ಬೀಜಮಂತ್ರದಿಂದ ಅಭಿಮಂತ್ರಿತಗೊಳಿಸಬೇಕು, ಈ ಚೂರ್ಣವನ್ನು ಯಾವ ಶತ್ರುವಿನ ತಲೆಯ ಮೇಲೆ ಹಾಕುವಿರೋ ಅವನು ಖಂಡಿತವಾಗಿಯೂ ಪರಲೋಕಕ್ಕೆ ತೆರಳುವನೆಂದು ಭಾವಿಸಿರಿ.

ಗೂಗೆಯ ಮಲ ಮತ್ತು ವಿಷವನ್ನು ಸೇರಿಸಿ ಅವುಗಳ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು, ಅದನ್ನು ಅಭಿಮಂತ್ರಿಸಬೇಕು, ಯಾವ ಶತ್ರುವಿನ ಮೇಲೆ ಈ ಮಿಶ್ರಣವನ್ನು ಹಾಕುವಿರೋ ಅವರು ಸಾಯುವದರಲ್ಲಿ ಯಾವ ಸಂದೇಹವೂ ಇಲ್ಲ.

ಶತ್ರುವಿನ ಮಲ ಮತ್ತು ವಿಷವನ್ನು ಒಂದುಗೂಡಿಸಿ ಮನುಷ್ಯನ ತಲೆ ಬುರುಡೆಯಲ್ಲಿ ತುಂಬಬೇಕು, ನಂತರ ಅದನ್ನು ಮಾರಣ ಬೀಜಮಂತ್ರದಿಂದ ಅಭಿಮಂತ್ರಿಸಬೇಕು, ಸ್ಮಶಾನಕ್ಕೆ ಹೋಗಿ ಅಲ್ಲಿ ಅವನ್ನು ಹೂಳಿಡಬೇಕು. ಆ ಮಲವು ಯಾವ ಯಾವ ರೀತಿಯಲ್ಲಿ ಒಣಗುತ್ತ ಹೋಗುವದೋ ಅದೇ ರೀತಿಯಲ್ಲಿ ಶತ್ರುವು ಸಹ ಒಣಗುತ್ತ ಹೋಗಿ ಕೊನೆಗೊಮ್ಮೆ ಸಾಯುವನೆಂಬದು ನಿಶ್ಚಿತ ಅದಕ್ಕೆ ಯಾವದೇ ಸಂದೇಹವೂ ಇಲ್ಲ.

ಲವಂಗ ಮತ್ತು ಭಾಂಗಗಳನ್ನು ಕೂಡಿಸಿ ಒಂದು ಚೂರ್ಣವನ್ನು ಸಿದ್ಧಪಡಿಸಬೇಕು, ನಂತರ ಅದನ್ನು ಮಾರಣಮಂತ್ರದಿಂದ ಅಭಿಮಂತ್ರಿಸಬೇಕು, ಈ ಚೂರ್ಣವನ್ನು ಒಳ್ಳೆಎಣ್ಣೆಯಲ್ಲಿ ಹಾಕಿ ಆ ಎಣ್ಣೆಯಿಂದ ದಿನಾಲು ದೀಪವನ್ನು ಉರಿಸಬೇಕು, ನೀವು ಯಾವ ಶತ್ರುವಿನ ಹೆಸರಿನಿಂದ ಚೂರ್ಣವನ್ನು ಅಭಿಮಂತ್ರಿಸಿರುವಿರೋ ಆ ಶತ್ರುವು ಈ ರೀತಿ ದೀಪವುರಿಯುತ್ತಿರುವ ಒಂದು ತಿಂಗಳೊಳಗಾಗಿ ಅತ್ಯಂತ ಖಾತ್ರಿಯಿಂದ ಸಾವಿಗೆ ತುತ್ತಾಗುವನು.

ಶತ್ರುವಿನ ಎರಡು ಪಾದಗಳ ಧೂಳಿಯನ್ನು ತರಬೇಕು, ಮತ್ತು ಅದರಿಂದ ಒಂದು ಗೊಂಬೆಯನ್ನು ಸಿದ್ಧಪಡಿಸಬೇಕು, ಆ ಗೊಂಬೆಯ ಹೊಟ್ಟೆಯಲ್ಲಿ ಚಿತಾಭಸ್ಮವನ್ನು ಸೇರಿಸಬೇಕು, ಸಾಧಕನು ಈ ಭಸ್ಮದಲ್ಲಿ ತನ್ನಮಧ್ಯ

ಬೆರಳಿನ ರಕ್ತವನ್ನು ಸೇರಿಸಬೇಕು, ತದನಂತರ ಪುತಳಿಯನ್ನು ಕಪ್ಪುವಸ್ತ್ರದಿಂದ ಸುತ್ತಬೇಕು, ಅದನ್ನು ಸುತಳಿಯಿಂದ ಬಿಗಿದು ಕಟ್ಟಬೇಕು, ಅನಂತರ ಅದನ್ನು ಕುಶಾಸನದ ಮೇಲೆ ಮಲಗಿಸಬೇಕು, ಆಗ ದೀಪವನ್ನು ಉರಿಸಬೇಕು ಮತ್ತು ಮಾರಣದ ಎರಡನೇ ಮಂತ್ರವನ್ನು ಶತ್ರುವಿನ ಹೆಸರನ್ನು ತೆಗೆದುಕೊಂಡು ಹತ್ತುಸಾವಿರ ಸಲ ಜಪಿಸಬೇಕು. ಜಪವನ್ನು ಮಾಡುತ್ತಿರುವಾಗ ಪ್ರತಿ ಒಂದು ಜಪದ ನಂತರ ಉದ್ದಿನ ಒಂದೊಂದೇ ಕಾಳನ್ನು ಪುತಳಿಯ ಬಾಯಿಯಲ್ಲಿ ಹಾಕುತ್ತ ಹೋಗಬೇಕು, ಆದರೆ ಈ ಎಲ್ಲ ಸಾಧನೆಯನ್ನು ಮಧ್ಯರಾತ್ರಿಯಲ್ಲಿಯೇ ಮಾಡಬೇಕೆಂಬದನ್ನು ಮರೆಯಬಾರದು. ಈ ರೀತಿಯಲ್ಲಿ ಒಂದು ತಿಂಗಳ ವರೆಗೆ ಸಾಧನೆಯನ್ನು ವಿಧಿಪೂರ್ವಕವಾಗಿ ಮಾಡುತ್ತ ಹೋಗಬೇಕು. ಆಗ ನೀವು ಇಚ್ಛಿಸಿದ ಸಿದ್ಧಿಯು ದೊರೆಯುವದು, ಅಂದರೆ ನಿಮ್ಮ ಮಹಾಶತ್ರು ಸಹ ನಾಶಹೊಂದುವದು ಖಾತ್ರಿ ಎಂದು ಭಾವಿಸಿರಿ,

ಓತಿಕಾಟದ ಚರಬಿ ಮತ್ತು ಗೂಗೆಯ ಚರಬಿಗಳನ್ನು ಒಂದುಗೂಡಿಸಿ ಅವುಗಳ ಮಿಶ್ರಣವನ್ನು ಅಭಿಮಂತ್ರಿಸಬೇಕು. ನಂತರ ಯಾವ ಶತ್ರುವು ಈ ಮಿಶ್ರಣವನ್ನು ಸ್ಪರ್ಶಿಸುವನೋ ಅವನು ನಿಶ್ಚಿತವಾಗಿಯೂ ಮರಣ ಹೊಂದುವದರಲ್ಲಿ ಸಂದೇಹವೂ ಇಲ್ಲ.

ಆರಿದ್ರಾ ನಕ್ಷತ್ರದ ಸಮಯದಲ್ಲಿ ಲಿಂಬೆಹಣ್ಣಿನ ಗಿಡದ ನಾಲ್ಕುಟೊಂಗೆಗಳನ್ನು ತರಬೇಕು. ಅವುಗಳನ್ನು ಮಾರಣಮಂತ್ರದಿಂದ ಅಭಿಮಂತ್ರಿಸಬೇಕು. ನಂತರ ನೀವು ಯಾವ ಶತ್ರುವಿನ ಮೇಲೆ ಇವರ ಪ್ರಯೋಗವಮಾಡಬೇಕೆಂಬ ಇಚ್ಛೆ ಇರುವದೋ ಅವರ ಶಯನಗೃಹದಲ್ಲಿ ಇವನ್ನು ಮುಚ್ಚಿಡಬೇಕು. ಆಗ ನಿಮ್ಮ ಶತ್ರುವಿಗೆ ಮೃತ್ಯುಕಾರಕ ಜಡ್ಡಾಗುವದು. ಆದರೆ ಈ ಟೊಂಗೆಗಳನ್ನು ಅಲ್ಲಿಂದ ತೆಗೆದಲ್ಲಿ ಅವನ ಕಾಯಿಲೆಯು ಗುಣವಾಗಿ ಪ್ರಾಣಸಂಕಟದಿಂದ ಅವನು ಪಾರಾಗುವನೆಂದು ಭಾವಿಸಿರಿ.

ಪುಷ್ಯನಕ್ಷತ್ರದ ಕಾಲದಲ್ಲಿ ಮನುಷ್ಯನ ನಾಲ್ಕು ಎಲುವುಗಳನ್ನು ತೆಗೆದುಕೊಂಡು ಬಂದು ಅವನ್ನು ಮಾರಣಮಂತ್ರದಿಂದ ಅಭಿಮಂತ್ರಿಸಬೇಕು.

ನಂತರ ಅದನ್ನು ನೀವು ಯಾವ ಶತ್ರುವಿನ ಮೇಲೆ ಪ್ರಯೋಗಮಾಡಬಯಸು ವಿರೋ ಅವನ ಮನೆಯಲ್ಲಿ ಹುದುಗಿಸಿಡಬೇಕು. ಆಗ ಶತ್ರುವು ನಾಶ ಹೊಂದುವನಲ್ಲದೇ ಇಡೀ ಅವನ ಕುಲವೇ ನಾಶವಾಗುವದೆಂದು ಭಾವಿಸಿರಿ.

## ಅಶ್ವಮಾರಣ ಪ್ರಯೋಗ

ಕಪ್ಪುವಸ್ತುವಿನಿಂದ ಒಂದು ಚೂರ್ಣವನ್ನು ಸಿದ್ಧಪಡಿಸಿ ಅಂದರ ಅಂಜನವನ್ನು ಮಾಡಬೇಕು. ಅಶ್ವಮಾರಣ ಮಂತ್ರದಿಂದ ಅದನ್ನು ಅಭಿ ಮಂತ್ರಿಸಿ ಅದನ್ನು ಕುದುರೆಯ ಕಣ್ಣಿಗೆ ಹಚ್ಚಲಾಗಿ ಕುದುರೆಯು ಕುರುಡಾ ಗುವದು ಅತ್ಯಂತ ಖಾತ್ರಿ ಎಂದು ಭಾವಿಸಿರಿ.

ಅಶ್ವಿನಿ ನಕ್ಷತ್ರದ ದಿನದಂದು ಒಂದು ಕುದುರೆಯ ೪ ಎಲುವುಗಳನ್ನು ತರಬೇಕು. ಅವನ್ನು ಅಶ್ವಮಾರಣ ಮಂತ್ರವನ್ನು ಹತ್ತುಸಾವಿರ ಸಲ ಜಪಿಸಿ ಅಭಿಮಂತ್ರಿಸಬೇಕು. ತದನಂತರ ಕುದುರೆಯ ಲಾಯದಲ್ಲಿ ಅವ ನ್ನೊಯ್ದು ಇರಿಸಬೇಕು ಅಲ್ಲಿರುವ ಕುದುರೆಗಳೆಲ್ಲ ಸಾಯುವವಲ್ಲದೇ ಆ ಲಾಯವು ಸದಾಕಾಲ ಖಾಲಿಯಾಗಿಯೇ ಉಳಿಯವದೆಂದು ಭಾವಿಸಿರಿ.

## ಮೀನನಾಶಕ ಪ್ರಯೋಗ

ಓಂ ಜಲೆ ಪಚಪಚ ಸ್ವಾಹಾ ಎಂಬುದು ಮೀನನಾಶಕ ಮಂತ್ರವಾ ಗಿರುವದು. ಮೊದಲು ಹತ್ತುಸಾವಿರ ಸಲ ಈ ಮಂತ್ರವನ್ನು ಪಠಿಸಿದಲ್ಲಿ ಮಂತ್ರ ಸಿದ್ಧಿಯು ದೊರೆಯುವದು ನಂತರ ಫಾಲ್ಗುಣಮಾಸದಲ್ಲಿ ಪೂರ್ವ ನಕ್ಷತ್ರ ಸಮಯದಲ್ಲಿ ಬೋರಿಗಿಡದ ೮ ಟೊಂಗೆಗಳನ್ನು ತಂದು ೧೦೮ ಸಲ ಮಂತ್ರದಿಂದ ಅವನ್ನು ಅಭಿಮಂತ್ರಿಸಿ ಮೀನುಗಾರರಮನೆಗೆ ಒಯ್ದು ಮುಟ್ಟಿಸಿ ಬೇಕು. ಆ ಮೀನುಗಾರರಲ್ಲಿ ಬರುವ ಮೀನುಗಳೆಲ್ಲ ನಿರುಪಯುಕ್ತವಾಗುವವು

## ಅಗಸನ ಬಟ್ಟೆಗಳ ನಾಶ

ಓಂ ಕುಂಭೆ ಸ್ವಾಹಾ ಎಂಬುದು ಈ ಪ್ರಯೋಗದ ಮಂತ್ರವಾಗಿರು ವದು. ಫಾಲ್ಗುಣಮಾಸದಲ್ಲಿ ಪೂರ್ವಾನಕ್ಷತ್ರದ ಸಮಯದಲ್ಲಿ ಚಮೇಲಿ

ಗಿಡದ ಅಗ್ನೆಯಳತೆಯ ೮ ಕಟ್ಟಿಗೆಯ ತುಂಡುಗಳನ್ನು ತಂದು ಅವನ್ನು ಮೇಲಿನ ಮಂತ್ರದಿಂದ ೧೦೮ ಸಲ ಅಭಿಮಂತ್ರಿಸಬೇಕು. ನಂತರ ಅವನ್ನು ಅಗಸನ ಮನೆಯಲ್ಲಿ ಒಯ್ದು ಇಡಬೇಕು. ಆಗ ಆ ಅಗಸನ ಬಟ್ಟೆಗಳೆಲ್ಲ ಇದ್ದಲ್ಲಿಯೇ ನಾಶವಾಗಲಿಕ್ಕೆ ಯಾವ ಸಂದೇಹವೂ ಇಲ್ಲ.

## ಎಣ್ಣೆಗಾರನ ಎಣ್ಣೆ ನಾಶ ಪ್ರಯೋಗ

ಓಂ ದಹದಹ ಸ್ವಾಹಾ: ಎಂಬುದು ಈ ಪ್ರಯೋಗದ ಮಂತ್ರವಾಗಿರುವದು. ಮೊದಲು ಹತ್ತುಸಾವಿರ ಸಲ ಈ ಮಂತ್ರವನ್ನು ಜಪಿಸಿದಲ್ಲಿ ಮಂತ್ರ ಸಿದ್ಧಿಯು ದೊರೆಯುವದು. ನಂತರ ಚಿತ್ರಾನಕ್ಷತ್ರದ ಸಮಯದಲ್ಲಿ ಸೀಗೆ ಕಾಯಿಗಿಡದ ಅಂಗೈಯಳತೆಯ ೪ ಕಟ್ಟಿಗೆ ತುಂಡುಗಳನ್ನು ತರಬೇಕು. ಅವನ್ನು ಈ ಮೇಲೆ ಹೇಳಿದ ಮಂತ್ರದಿಂದ ಅಭಿಮಂತ್ರಿಸಬೇಕು, ಅಭಿಮಂತ್ರಿಸುವಾಗ ೧೦೮ ಸಲ ಈ ಮಂತ್ರವನ್ನು ಜಪಿಸಬೇಕು. ತದನಂತರ ಈ ತುಂಡುಗಳನ್ನು ಎಣ್ಣೆಗಾರನ ಮನೆಗೊಯ್ದು ಇರಿಸಬೇಕು. ಆಗ ಅವನ ಮನೆಯಲ್ಲಿಯ ಎಣ್ಣೆಯು ತಂತಾನೇ ಎಲ್ಲವೂ ನಾಶವಾಗಲಿಕ್ಕೆ ಯಾವದೇ ತರದ ಸಂದೇಹವೂ ಇಲ್ಲ.

## ಬೆಳೆನಾಶಕ ಪ್ರಯೋಗ

ಗಂಧಕ ಹಾಗೂ ನೀರುಗಳ ಮಿಶ್ರಣವನ್ನು ಸಿದ್ಧಪಡಿಸಬೇಕು. ನಂತರ ಅದನ್ನು ಮೇಲೆ ಹೇಳಿದ ಮಂತ್ರದಿಂದ ಅಭಿಮಂತ್ರಿಸಬೇಕು. ಅದನ್ನೊಯ್ದು ಬೆಳೆಗಳ ಮೇಲೆ ಹಾಕಲಾಗಿ ಆ ಬೆಳೆಯು ತಂತಾನೇ ಸಂಪೂರ್ಣವಾಗಿ ನಾಶವಾಗಲಿಕ್ಕೆ ಯಾವ ಸಂದೇಹವೂ ಇಲ್ಲ.

## ಹಾಲು ನಾಶಕ ಪ್ರಯೋಗ

ಗಿಡದ ೪ ಅಂಗೈಯಳತೆಯ ತುಂಡುಗಳನ್ನು ತಂದು ಅನುರಾಧಾ ನಕ್ಷತ್ರದ ಸಮಯದಲ್ಲಿ ಅಭಿಮಂತ್ರಿಸಬೇಕು. ಅದೇ ನಕ್ಷತ್ರದ ಕಾಲಕ್ಕೆ

ಗವಳಿಗರ ಮನೆಯಲ್ಲಿ ಒಯ್ದು ಇರಿಸಿದರೆ ಅವನ ದನಗಳು ಹಾಲುಕೊಡದೇ ಅವುಗಳ ಹಾಲು ತಂತಾನೇ ಅಟ್ಟಿಸಿ ಹೋಗುವವೆಂದು ಭಾವಿಸಿರಿ.

## ಶತ್ರುವನ್ನು ವಿಕೃತಗೊಳಿಸುವ ಮಂತ್ರ

ಓಂ ಹರಿ ಶ್ರೀ ಹರಸ್ತಯಾ

ರವಿವಾರ ಮಧ್ಯರಾತ್ರಿಯ ಹೊತ್ತಿಗೆ ಸ್ಮಶಾನಕ್ಕೆ ಹೋಗಿ ಚಿತಾಭಸ್ಮವನ್ನು ತರಬೇಕು, ಆ ಭಸ್ಮದ ಮಸಿಯನ್ನು ಮಾಡಿಕೊಂಡು ಮೇಲಿನಮಂತ್ರವನ್ನು ಕಾಗದದ ಮೇಲೆ ಬರೆಯಬೇಕು, ಮತ್ತು ಅದನ್ನು ಮಾರಣಮಂತ್ರದಿಂದ ಅಭಿಮಂತ್ರಿಸಿ ಹೋಮ ಮಾಡಬೇಕು. ಈ ರೀತಿಯಾಗಿ ೧೦೮ಸಲ ಹವನ ಮಾಡಬೇಕು ಆಗ ಶತ್ರುವು ವಿಕೃತನೂ, ವಿಚಿತ್ರನೂ, ವಿಕ್ಷಿಪ್ತನೂ ಆಗುವನು. ಅಲ್ಲದೇ ಹುಚ್ಚನ ಹಾಗೆ ಮಾತನಾಡಲು ಪ್ರಾರಂಭಿಸುವನು.

## ಶತ್ರುನಾಶಕ ಮಂತ್ರ

| | | | |
|---|---|---|---|
| ೪೨ | ೪೯ | ೧ | ೭ |
| ೬ | ೩ | ೪೬ | ೪೫ |
| ೪೮ | ೪೩ | ೮ | ೧ |
| ೪ | ೫ | ೪೪ | ೪೭ |

ಈ ಯಂತ್ರವನ್ನು ಆನೆಯ ಉಗುರಿನಿಂದ ಸಿದ್ಧಪಡಿಸಿದ ಮಸಿಯಿಂದ ಕಬ್ಬಿಣದ ಲೆಕ್ಕಣಿಕೆಯಿಂದ ಕಾಗದದ ಮೇಲೆ ಬರೆಯಬೇಕು. ಅದರ ಮೇಲೆ ಶತ್ರುವಿನ ಹೆಸರನ್ನು ಬರೆಯಬೇಕು, ಆ ಕಾಗದವನ್ನು ಅಮವಾಸ್ಯೆಯ ದಿವಸ ಸ್ಮಶಾನಕ್ಕೆ ಹೋಗಿ ಹುಗಿದಿರಿಸಿ ಬರಬೇಕು. ಅಂದರೆ ನೀವು ಯಾವ ಶತ್ರುವಿನ ಹೆಸರನ್ನು ಬರೆದಿರ ವಿರೋ ಅವರು ತತ್ಕ್ಷಡಲೇ ಮರಣಾಸನ್ನರಾಗುವವಕ್ಕೆ ಯಾವ ಸಂದೇಹವೂ ಇಲ್ಲ.

## ಮತ್ತೊಂದು ಯಂತ್ರ

| |
|---|
| ಅಮುಕ |
| ಮ ರಯ ಮಾರಯ |

ಕಬ್ಬಿಣದ ಲೆಕ್ಕಣಿಕೆಯಿಂದ ಈ ಯಂತ್ರವನ್ನು ಬರೆಯಬೇಕು. ಅದಕ್ಕಾಗಿ ಚಿತಾಭಸ್ಮವನ್ನು ಮಸಿಯಂತೆ ಉಪಯೋಗಿಸಿಕೊಳ್ಳಬೇಕು, ಹೀಗೆ ಈ ಯಂತ್ರವನ್ನು ಸಾಸುವೆ ಎಲೆಯ ಮೇಲೆ ಬರೆಯಬೇಕು, ತದನಂತರ ಆ ಎಲೆಯನ್ನು ಅಗ್ನಿಯಲ್ಲಿ ಹೋಮ ಮಾಡಬೇಕು, ಅಮುಕ ಎಂದು ಬರೆದಿರುವ ಸ್ಥಳದಲ್ಲಿ ಶತ್ರುವಿನ ಹೆಸರನ್ನು ಬರೆಯಬೇಕು. ಈ ರೀತಿಯಾಗಿ ಹನ್ನೊಂದುನೂರುಸಲ ಹವನವನ್ನು ಮಾಡಬೇಕು. ಅಂದರೆ ನೀವು ಯಾವ ಶತ್ರುವಿನ ಹೆಸರನ್ನು ಬರೆದಿರುವಿರೋ ಅವನು ಸಾಯುವದು ನಿಶ್ಚಿತವೆಂದು ಭಾವಿಸಿರಿ.

## ಶತ್ರುವಿನ ಬುದ್ಧಿನಾಶಕ ಮಂತ್ರ

| | | | |
|---|---|---|---|
| ೮೪ | ೯೦ | ೧ | ೭ |
| ೯ | ೩ | ೮೮ | ೭೭ |
| ೯೧ | ೯೭ | ೮ | ೧ |
| ೪ | ೫ | ೯೭ | ೭೯ |

ಗೂಗೆಯ ರೆಕ್ಕೆಯ ಮೇಲೆ ಈ ಯಂತ್ರವನ್ನು ಕಬ್ಬಿಣದ ಲೆಕ್ಕಣಿಕೆಯಿಂದ ಬರೆಯಬೇಕು ಮತ್ತು ಅದನ್ನು ಶತ್ರುವಿನ ಕಾಲಿಗೆಕಟ್ಟುವ ವ್ಯವಸ್ಥೆಯನ್ನು ಮಾಡಬೇಕು. ಆಗ ಶತ್ರುವಿನ ಬುದ್ಧಿಯು ನಷ್ಟವಾಗಿ ಆವನು ಹುಚ್ಚನಂತಾಗುವದು ಖಾತ್ರಿ ಎಂದು ಭಾವಿಸಿರಿ.

## ಶತ್ರುಮಾರಣ ಮಂತ್ರ

| | | | |
|---|---|---|---|
| ೫೮ | ೩೭ | ೫ | ೮ |
| ೭೮ | ೯ | ೩ | ೫೩ |
| ೫೪ | ೫ | ೮೪ | ೬೧ |
| ೭ | ೮೭ | ೬೮ | ೫೮ |

ಕಾಗದದ ಮೇಲೆ ಈ ಮಂತ್ರವನ್ನು ಆನೆಯ ಹಲ್ಲಿನಿಂದ ಮಸಿಯಂತೆ ಉಪಯೋಗಿಸಿಕೊಂಡು ಬರೆಯಬೇಕು. ನಂತರ ಅದನ್ನು ಸ್ಮಶಾನ ಭೂಮಿಯಲ್ಲಿ ಹೂಳಬೇಕು. ಆಗ ಶತ್ರುವು ಸಾವಿಗೀಡಾಗುವನೆಂದು ಭಾವಿಸಿರಿ.

ಇದಲ್ಲದೇ ಯಾವದಾದರೂ ಗಿಡದ ಕೆಳಗಿನ ಧೂಳಿಯನ್ನು ತಂದು ಕಾಗದದ ಮೇಲೆ ಅದರಿಂದ ಈ ಯಂತ್ರವನ್ನು ಬರೆದು ಶತ್ರುವಿನ ಸ್ಥಾನಕ್ಕೆ ತಲುಪಿಸಿದಲ್ಲಿ ಅವನು ಅತ್ಯವಶ್ಯವಾಗಿ ಸಾವಿಗೀಡಾಗುವನೆಂದು ಭಾವಿಸಿರಿ. ಈ ಯಂತ್ರದ ಕಾರ್ಯವನ್ನು ಶ್ರದ್ಧೆಯಿಂದ ನೇರವೇರಿಸದಿದ್ದರೆ ಶತ್ರುವು ಪಾರಾಗುವ ಸಂಭವವಿದೆ

## ಭಯಮಾರಣ ಮಂತ್ರ

| | | | |
|---|---|---|---|
| ೪೩ | ೧ | ೮೫ | ೮೫ |
| ೮ | ೯ | ೪೩ | ೩೫ |
| ೭೮ | ೭೩ | ೯ | ೫೫ |
| ೭ | ೫ | ೩೬ | ೮ |

ಈ ಯಂತ್ರವನ್ನು ಕಾಗದದ ಮೇಲೆ ಬರೆದು ಬಾಲಕನ ಕೊರಳಲ್ಲಿ ರವಿವಾರ ದಿವಸ ಕಟ್ಟಿದಲ್ಲಿ ಅವನಿಗೆ ಯಾವದೇ ಭಯ ಉಳಿಯುವದಿಲ್ಲವೆಂದು ಭಾವಿಸಿರಿ.

ಕೆಂಪು ಕಾಗದದ ಮೇಲೆತುಳಸಿ ಎಲೆಯ ರಸ ತೆಗೆದು ಅದನ್ನು ಮಸಿಯಾಗಿ ಉಪಯೋಗಿಸಿಕೊಂಡು ಈ ಯಂತ್ರವನ್ನು ಬರೆಯ

ಬೇಕು. ಯಾವ ಬಾಲಕನು ಹೆದರಿರುವನೋ ಅವನಿಗೆ ಅದನ್ನು ತೋರಿಸಿ ಅಡವಿಯಲ್ಲಿ ಒಗೆದು ಬರಬೇಕು. ಆ ಬಾಲಕನು ನಿರ್ಭೀತನಾಗಲಿಕ್ಕೆ ಯಾವ ಸಂದೇಹವೂ ಇಲ್ಲ.

## ಸರ್ಪ ನಿವಾರಕ ಮಂತ್ರ

| | | | |
|---|---|---|---|
| ೮೦ | ೮೭ | ೧ | ೭ |
| ೬ | ೩ | ೮೪ | ೮೩ |
| ೮೬ | ೮೮ | ೮ | ೧ |
| ೪ | ೫ | ೮೨ | ೮೩ |

ಈ ಯಂತ್ರವನ್ನು ಕಾಗದದ ಮೇಲೆ ಮಸಿಯಿಂದ ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಅಭಿಮಂತ್ರಿಸಿದ ನಂತರ ಮನೆಯಲ್ಲಿರಿಸಬೇಕು, ಯಾವ ಮನೆಯಲ್ಲಿ ಈ ಯಂತ್ರವನ್ನು ಇರಿಸಲಾಗುವದೋ ಆ ಮನೆಗೆ ಸರ್ಪಗಳು ಹಣಿಕಿ ಸಹ ಹಾಕುವದಿಲ್ಲ. ಇದು ಅತ್ಯಂತ ಖಾತ್ರಿ ಎಂದು ಭಾವಿಸಿರಿ.

## ಶತ್ರುನಾಶಕ ಮಂತ್ರ

| | | |
|---|---|---|
| ೮ | ೧ | ೬ |
| ೩ | ೫ | ೭ |
| ೪ | ೯ | ೨ |
| ವೃಷಭ | ಕರ್ಕ | ತುಲಾ |

ವದ್ಯ ಪಕ್ಷದ ಶನಿವಾರ ದಿವಸ ಸಾಸ್ವಿ ಎಲೆಯನ್ನು ತರಬೇಕು. ದಕ್ಷಿಣದ ಕಡೆಗೆ ಮುಖಮಾಡಿಕೊಂಡು ಕುಳಿತು ಆ ಎಲೆಯ ಮೇಲೆ ಈ ಯಂತ್ರವನ್ನು ಬರೆಯಬೇಕು, ಮೇಲ್ಭಾಗದಲ್ಲಿ ನೀವು ಯಾವ ಶತ್ರುವು ನಾಶಹೊಂದಬೇಕೆಂದು ಬಯಸುತ್ತಿರುವಿರೋ ಅವನ ಹೆಸರನ್ನು ಬರೆಯಬೇಕು. ತದನಂತರ

ತದನಂತರ ಈ ಯಂತ್ರದ ಹೋಮವನ್ನು ಮಾಡಲಾರಂಭಿಸಬೇಕು. ಪ್ರತಿ ದಿವಸ ಈ ರೀತಿ ೧೧ ಎಲೆಗಳ ಮೇಲೆ ಮಂತ್ರವನ್ನು ಬರೆದು ಅಭಿಮಂತ್ರಿಸಿ ಅವುಗಳ ಹವನವನ್ನು ಮಾಡಬೇಕು. ಈ ೧೫ ದಿನಗಳ ಅವಧಿಯಲ್ಲಿ ನಿಮಗೆ ಫಲಪ್ರಾಪ್ತಿಯಾಗುವದು, ಅಂದರೆ ನಿಮ್ಮ ಶತ್ರುವು ನಾಶ ಹೊಂದುವನು.

## ಮತ್ತೊಂದು ಮಂತ್ರ

| | | |
|---|---|---|
| ಹ್ರೀಂ ಹ್ರೀಂ ಹ್ರೀಂ ಹ್ರೀಂ ಹ್ರೀಂ | | |
| ಹ್ರೀಂ | ಸೋಹಂ | ಹ್ರೀಂ |

ಕೇಶರ ಹಾಗೂ ಗೋರೋಚನಗಳನ್ನು ಸೇರಿಸಿ ಆ ಮಿಶ್ರಣದಿಂದ ಈ ಯಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು. ಅದರ ಮೇಲೆ ಶತ್ರುವಿನ ಹೆಸರನ್ನು ಬರೆಯಬೇಕು. ಈ ಯಂತ್ರವನ್ನು ನಿಮ್ಮ ಶತ್ರುವಿನ ತಲೆಯಃಚಂಡಿಕೆ ಇಲ್ಲವೇ ಕೂದಲಿಗೆ ಕಟ್ಟುವ ವ್ಯವಸ್ಥೆಯನ್ನು ಮಾಡಬೇಕು, ಆಗ ಆ ನಿಮ್ಮ ಶತ್ರುವು ಪರಲೋಕ ವಾಸಿಯಾದನೆಂದೇ ಭಾವಿಸಿರಿ.

# ಸಿದ್ಧಿ ಸಾಧನೆಯು

## ಯೋಗಿನಿ ಸಾಧನೆಯು

ಮಂತ್ರ:— ಓಂ ನಮೋ ಮಹಾಕಾಲಿ ಯೋಗಿನಿ ಶಂಖಿನಿ
ಸಾಧಯ ಸಾಧಯ ಗ್ರಿಂ ಗ್ರಿಂ ಹೊಂ ಫಟ್ ಸ್ವಾಹಾ

ಮೊದಲು ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ಶುಚಿರ್ಭೂತರಾಗ ಬೇಕು, ಧೂಪ-ದೀಪ, ಗುಗ್ಗಳಗಳನ್ನು ಹಚ್ಚಬೇಕು, ಗುಗ್ಗಳವನ್ನು ಈ ಮೇಲಿನ ಮಂತ್ರದಿಂದ ಅಭಿಮಂತ್ರಿಸಿ ಅಗ್ನಿಯಲ್ಲಿ ಹಾಕಬೇಕು ತದನಂತರ ೧೦೦೮ ಸಲ ಈ ಮಂತ್ರವನ್ನು ಜಪಿಸಬೇಕು, ೨೧ ದಿನಗಳ ವರೆಗೆ ಈ ರೀತಿ ಸಾಧನೆಯನ್ನು ಮಾಡಿದನಂತರ ಯೋಗಿನಿ ಸಾಧನೆಯು ಸಿದ್ಧಿಯಾಗುವದು ಅವಳು ನಿವ.ಗೆ ಪ್ರಸನ್ನಳಾಗಿ ಬೇಕಾದ ವರವನ್ನು ಕೊಡುವಳೆಂದುಭಾವಿಸಿರಿ

## ಸರಸ್ವತಿಯನ್ನು ಪ್ರಸನ್ನೀಕರಿಸುವ ಮಂತ್ರ

ಓಂ ಹ್ರೀಂ ಶ್ರೀಂ ಅಹಂ ವದವದ ವಾಗ್ವಾದಿನಿ ಭವತಿ ಸರಸ್ವತಿ
ನಮಃ। ಸ್ವಃ ವಿದ್ಯಾಂ ದೇಹಿ ಮಮ ಹ್ರೀಂ ಸರಸ್ವತಿ ಸ್ವಾಹಾ

ಗ್ರಹಣದ ಮೊದಲು ಈ ಮಂತ್ರವನ್ನು ೧೪೪ ಸಲ ಜಪಿಸಬೇಕು. ತದನಂತರ ೨೧ ದಿನಗಳ ವರೆಗೆ ಈ ಜಪವನ್ನು ಮಾಡುತ್ತ ಹೋಗಬೇಕು. ಆಗ ಸರಸ್ವತಿಯು ನಿಮಗೆ ಪ್ರಸನ್ನಳಾಗಿ ನಿಮ್ಮ ವಿದ್ಯಾಕಾಂಕ್ಷೆಯನ್ನು ಪೂರ್ಣಗೊಳಿಸುವಳೆಂದು ತಿಳಿಯಿರಿ.

## ಲಕ್ಷ್ಮಿ ಸಾಧನೆಯು

ಶ್ರೀ ಶುಕ್ಲಮಹಾ ಶುಕ್ಲಕಮಲದಲ ನಿವಾಸೆ ಶ್ರೀ ಮಹಾಲಕ್ಷ್ಮಿ ನಮೋನಮಃ

ವ್ಯಾಪಾರಸ್ಥರು ಮುಂಜಾನೆ ಹೊತ್ತಿನಲ್ಲಿ ಸ್ನಾನಾದಿಗಳನ್ನು ತೀರಿಸಿ ಶುಚಿರ್ಭೂತರಾಗಬೇಕು. ಮುತ್ತಿನ ಮಾಲೆಯಿಂದ ೧೦೮ ಸಲ ಈ ಮಂತ್ರ

ವನ್ನು ಜಪಿಸಬೇಕು, ನಂತರ ಅಂಗಡಿಗೆಹೋಗಿ ವ್ಯವಹಾರವನ್ನು ಪ್ರಾರಂಭಿಸಬೇಕು, ಆಗ ಲಕ್ಷ್ಮಿಯು ಪ್ರಸನ್ನ ಹೊಂದಿರುವದರಿಂದ ನಿಮಗೆ ಬಹಳಷ್ಟು ವ್ಯಾಪಾರವಾಗಿ ಲಾಭವು ಖಾತ್ರಿಯಿಂದ ಆಗುವದಕ್ಕೆ ಸಂದೇಹವಿಲ್ಲ.

## ಸಿದ್ಧಿ ಮಂತ್ರ

ಓಂ ಹ್ರೀಂ ಗೌತುಪ ಯೋಗ

ಬುದ್ಧಿವಂತರೆನ್ನಿಸಿಕೊಳ್ಳುವ ಜನರು ಸಿದ್ಧಿಯನ್ನು ಪಡೆಯಬೇಕಾದರೆ ಅನುಸರಿಸಬೇಕಾದ ಮಂತ್ರವಿದು. ಅವರು ಮೊದಲು ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ಶುಚಿರ್ಭೂತರಾಗಬೇಕು, ಮತ್ತು ಮಧ್ಯರಾತ್ರಿಯಲ್ಲಿ ಈ ಮಂತ್ರವನ್ನು ಜಪಿಸಬೇಕು. ಪ್ರತಿದಿವಸ ೩೦೦೦ ಸಲ ಈ ಮಂತ್ರವನ್ನು ಜಪಿಸಿದಲ್ಲಿ ನಿಶ್ಚಿತವಾಗಿಯೂ ಸಿದ್ಧಿಯಾಗುವದೆಂದುತಿಳಿಯಿರಿ

## ಇಚ್ಛಾ ಪೂರ್ತಿ

ಗೂಗೆಯ ಎಲುವನ್ನು ತಂದು ಅದನ್ನು ಪುಡಿಮಾಡಿ ಆದರ ತಿಲಕವನ್ನು ಹಚ್ಚಿಕೊಳ್ಳಬೇಕು. ತದನಂತರ ಅಷ್ಟೋತ್ತರ ಮಂತ್ರದಿಂದ ೧ ಲಕ್ಷ ಸಲ ಜಪವನ್ನು ಮಾಡಬೇಕು. ಆಗ ಮನದಲ್ಲಿರುವ ಸರ್ವ ಇಷ್ಟಗಳೂ ಕಾಮನೆಗಳೂ ಪೂರ್ತಿಯಾಗುವದು ಅತ್ಯಂತ ನಿಶ್ಚಿತವೆಂದು ತಿಳಿಯಿರಿ.

## ಸ್ತ್ರೀಸ್ಖಲಿತ ಮಂತ್ರ

ಓಂ ನಮೋ ಭಗವತೆ ರುದ್ರಾಯ! ಕಾಮಶರಾಯ
ಸ್ತ್ರೀಣಾಂ ಮದವ್ ದ್ರವಾಯ ಫಟ್ ಫಟ್ ಸ್ವಾಹಾ

ರತಿಕರ್ಮದ ಕಾಲಕ್ಕೆ ಪುರುಷನು ತಾನು ಏಕಾಗ್ರಚಿತ್ತನಾಗಬೇಕು. ಮತ್ತು ಈ ಮಂತ್ರದಿಂದ ಜಪಮಾಡಬೇಕು. ಅಂದರೆ ಸ್ತ್ರೀಯು ಮೊದಲು ಸ್ಖಲಿತಳಾಗುವಳೆಂದು ತಿಳಿಯಬೇಕು, ಅಲ್ಲದೇ ರತಿಕರ್ಮದಲ್ಲಿ ಪುರುಷನಿಗೆ ವಿಜಯ ದೊರಕುವದಲ್ಲದೇ ಪ್ರೇಮಿಗಳಲ್ಲಿ ಹೆಚ್ಚು ಪ್ರೇಮವುಂಟಾಗುವದು.

## ಜ್ವರ ನಿವಾರಕ ಮಂತ್ರ

ಓಂ ನಮೋ ಭಗವತೆ ರುದ್ರಾಯ ಶೂಲಪಾಣಾಯೆ
ಪಿಶಾಚ್ಚಾಧಿಪತಯೆ ಆವಶಾಯ ಕೃಷ್ಣ ಪಿಂಗಲ ಫಟ್ ಸ್ವಾಹಾ

ಭೋಜಪತ್ರದ ಮೇಲೆ ಈ ಮಂತ್ರವನ್ನು ಇದ್ದಲಿಯಿಂದ ಬರೆಯಬೇಕು, ಅಜಾರಿಯಿದ್ದವರ ಕೈಗೆ ಅದನ್ನು ಕಟ್ಟಬೇಕು, ಪ್ರತಿದಿನ ಬರುವ ಜ್ವರ ನಿಲ್ಲುವವು. ಅಲ್ಲದೇ ರೋಗಿಯು ಇದನ್ನು ೧೦೮ ಸಲ ಜಪಿಸಿದಲ್ಲಿ ೩ ದಿನಗಳಿಗೊಮ್ಮೆ ಬರುವ ಜ್ವರದ ತಾಪವೂ ಇಲ್ಲದಂತಾಗುವದು ಖಾತ್ರಿ ಎಂದೂ ನಿಶ್ಚಿತವೆಂದೂ ತಿಳಿಯಿರಿ.

## ಪುತ್ರಪ್ರಾಪ್ತಿ ಸಾಧನೆ

ಇದರ ಮಂತ್ರವು ಈ ರೀತಿಯಾಗಿರುವದು:—

ಓಂ ಹ್ರೀಂ ಹ್ರೀಂ ರಂ ಕುರು ಕುರು ಸ್ವಾಹಾ
ಆಯುತ ಜಪಾತ್ ಸಿದ್ಧಿಃ

ಮಾವಿನಗಿಡದ ಮೇಲೆ ಕುಳಿತುಕೊಂಡು ಏಕಾಗ್ರಚಿತ್ತದಿಂದ ಈ ಮಂತ್ರವನ್ನು ಜಪಿಸಬೇಕು. ೧೦೮ ಸಲ ಜಪಿಸಿದಲ್ಲಿ ಮಂತ್ರಸಿದ್ಧಿಯು ಪ್ರಾಪ್ತವಾಗುವದು, ಮುಂದೆ ಪ್ರಯೋಗ ಕಾಲದಲ್ಲಿ ಮತ್ತೆ ೧೦೮ ಸಲ ಜಪಿಸಬೇಕು, ಆಗ ಅಪುತ್ರಕರು ಪುತ್ರಭಾಗ್ಯವನ್ನು ತಪ್ಪದೇ ಪಡೆಯುವರೆಂದು ತಿಳಿಯಿರಿ.

## ಭೂಗತ ದ್ರವ್ಯಪ್ರಾಪ್ತಿ ಸಾಧನೆ

ಇದರ ಮಂತ್ರವು ಈ ರೀತಿಯಾಗಿರುವದು:—

ಓಂ ನಮೋ ವಿಘ್ನವಿನಾಶಾಯ ನಿಧಿದರ್ಶನ
ಕುರು ಕುರು ಸ್ವಾಹಾ

ಈ ಮಂತ್ರವನ್ನು ಜಪಿಸುವ ಮೊದಲು ಸ್ನಾನಾದಿ ಕರ್ಮಗಳನ್ನು ತೀರಿಸಿ ಕೊಂಡು ಶುಚಿರ್ಭೂತರಾಗಬೇಕು, ತದನಂತರ ಹತ್ತುಸಾವಿರ ಸಲ ಈ ಮಂತ್ರವನ್ನು ಜಪಿಸಬೇಕು, ಪ್ರಯೋಗವನ್ನು ಮಾಡುವ ಕಾಲದಲ್ಲಿ ೧೦೮ ಸಲ ಪುನಃ ಪುನಃ ಜಪಿಸಬೇಕು, ಅಂದರೆ ಪ್ರಯೋಗವು ಸಿದ್ಧಿಸುವದು, ಅರ್ಥಾತ್ ಭೂಗತ ದ್ರವ್ಯದ ಪ್ರಾಪ್ತಿಯಾಗುವದೆಂದು ತಿಳಿಯಿರಿ.

## ಭಗವತಿ ಮಂತ್ರ

ಓಂ ಹ್ರೀಂ ಹ್ರೀಂ ಮಾನಸಸಿದ್ಧಿಕರಿಂ ಹ್ರೀಂ ನಮಃ

ಒಂದು ತಿಂಗಳವರೆಗೆ ಈ ಮಂತ್ರವನ್ನು ಜಪಿಸಬೇಕು, ಅಲ್ಲದೇ ಪ್ರತಿ ದಿವಸ ಒಂದು ಕೆಂಪು ಕಣಗಿಲ ಹೂವನ್ನು ಭಗವತಿದೇವಿಗೆ ಏರಿಸಬೇಕು, ಅಂದರೆ ಭಗವತಿ ದೇವಿಯು ಅಷ್ಟಗುಣಗಳಲ್ಲಿ ಒಂದನ್ನು ನಿಮಗೆ ದಯ ಪಾಲಿಸುವಳೆಂದು ತಿಳಿಯಿರಿ.

## ಪುತ್ರದಾಯಕ ಯಂತ್ರ

| | | | | | | | | |
|---|---|---|---|---|---|---|---|---|
| ಓಂ | ಓಂ | ಓಂ | ಓಂ | ಓಂ | ಓಂ | ಓಂ | ಓಂ | ಓಂ |
| ಹ್ರೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ | ಹ್ರೀಂ |

ರವಿವಾರ ದಿವಸ ಮೂಲಾನಕ್ಷತ್ರವಿರುವ ಯೋಗವನ್ನು ಹುಡುಕಿ ಕೊಂಡು ಭೋಜಪತ್ರದ ಮೇಲೆ ಅಷ್ಟಗಂಧದಿಂದ ಬರೆದು ಗರ್ಭವತಿ ಸ್ತ್ರೀಯರ ಬಲಗೈಗೆ ಕಟ್ಟಬೇಕು, ಅಂದರೆ ಅವರು ಪುತ್ರ ರತ್ನವನ್ನು ಅತಿ ಖಾತ್ರಿಯಿಂದ ಪಡೆಯುವರೆಂದು ತಿಳಿಯಿರಿ.

## ಮತ್ತೊಂದು ಮಂತ್ರ

| | | | |
|---|---|---|---|
| ೬ | ೨ | ೮ | ೩೫ |
| ೩ | ೨ | ೩ | ೬೩ |
| ೮ | ೧ | ೨೦ | ೧೯ |
| ೩೦ | ೩೩ | ೪ | ೫ |

ಈ ಯಂತ್ರವನ್ನು ಕಾಗದದಮೇಲೆ ಬರೆಯಬೇಕು. ಅದನ್ನು ನೀರಿನಲ್ಲಿ ಹಾಕಿ ತೊಳೆಯಬೇಕು, ನಂತರ ಆ ನೀರನ್ನು ಸಾಯಂಕಾಲ ಗರ್ಭವತಿ ಸ್ತ್ರೀಯರಿಗೆ ಕುಡಿಯಲು ಕೊಡಬೇಕು, ಆಗ ಅವರು ಪುತ್ರರತ್ನವನ್ನು ಅವಶ್ಯವಾಗಿ ಪಡೆಯುವಳೆಂಬದು ನಿಶ್ಚಿತ.

## ಗರ್ಭದಾತಾ ಮಂತ್ರ

| | | | |
|---|---|---|---|
| ಓಂ | ಓಂ | ಓಂ | ಓಂ |
| ಓಂ | ಓಂ | ಓಂ | ಓಂ |
| ಓಂ | ಓಂ | ಓಂ | ಓಂ |
| ಹ್ರೀಂ | ಹ್ರೀಂ | ಹ್ರೀಂ | ಹ್ರೀಂ |

ರವಿವಾರ ದಿವಸ ಮೂಲಾನಕ್ಷತ್ರವಿರುವಂತಹ ಯೋಗವನ್ನು ಕಂಡುಹಿಡಿಯಬೇಕು, ನಂತರ ಅಂದು ಭೋಜಪತ್ರದ ಮೇಲೆ ಅಷ್ಟಗಂಧದಿಂದ ಈ ಯಂತ್ರವನ್ನು ಬರೆಯಬೇಕು, ಮಕ್ಕಳಿಲ್ಲದ ಸ್ತ್ರೀಯರ ಎಡಗೈಗೆ ಈ ಯಂತ್ರವನ್ನು ಕಟ್ಟಬೇಕು ಅಂದರೆ ಅವರು ಗರ್ಭವತಿಯರಾಗಿ ಪುತ್ರವತಿಯರಾಗುವದು ಅತ್ಯಂತ ನಿಶ್ಚಿತವೆಂದು ತಿಳಿದುಕೊಳ್ಳಬೇಕು.

## ಬಾಲರಕ್ಷಕ ಮಂತ್ರ




ಈ ಯಂತ್ರವನ್ನು ಆದಿತ್ಯವಾರ ದಿವಸ ಭೋಜಪತ್ರದ ಮೇಲೆ ಬರೆಯಬೇಕು. ಅದನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ತದನಂತರ ೩ ಲೋಹಗಳ ತಾಯಿತವನ್ನು ಸಿದ್ಧಪಡಿಸಿ ಅದರಲ್ಲಿ ಈ ಯಂತ್ರವನ್ನು ಇರಿಸಿ ಬಾಲಕನ ಕೊರಳಲ್ಲಿ ಕಟ್ಟಬೇಕು. ಅಂದರೆ ಆ ಬಾಲಕನು ಸುರಕ್ಷಿತವಾಗಿ ಉಳಿಯುವನು. ಅವನಿಗೆ ಯಾವ ತರದ ಬಾಧೆಯಾಗಲಿ, ಜ್ವರಜಾಡ್ಯ ಇತ್ಯಾದಿ ಕಾಯಿಲೆಯಾಗಲಿ ಯಾವದೇ ತಗಲುವದಿಲ್ಲವೆಂದೂ ಆರೋಗ್ಯವಂತನಾಗಿಯೇ ಇರುವದು ಅತ್ಯಂತ ಖಾತ್ರಿ ಎಂದೂ ತಿಳಿದುಕೊಳ್ಳಬೇಕು.

## ಗರ್ಭ ಸಿದ್ಧಿ ಯಂತ್ರ

| | | |
|---|---|---|
| ಶ್ರೀ ರಾಮ ಗರ್ಭಸಂಭವ | ಶ್ರೀ ರಾಮ | ಶ್ರೀ ರಾಮ ಗರ್ಭಸಂಭವ |
| ಶ್ರೀ ರಾಮ ಗರ್ಭಸಂಭವ | ಸ್ತ್ರೀಯ ಹೆಸರು | ಶ್ರೀ ರಾಮ ಗರ್ಭಸಂಭವ |
| ಶ್ರೀ ರಾಮ ಗರ್ಭಸಂಭವ | ಶ್ರೀ ರಾಮ | ಶ್ರೀ ರಾಮ ಗರ್ಭಸಂಭವ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಕೌಶಲ್ಯಾದೇವಿ ಹಾಗೂ ಶ್ರೀ ರಾಮ ಚಂದ್ರನನ್ನು ಅಖಂಡವಾಗಿ ಧ್ಯಾನಿಸಬೇಕು, ತದನಂತರ ಈ ಯಂತ್ರವನ್ನು ಧೂಪ ದೀಪಗಳಿಂದ ವಿಧಿಪೂರ್ವಕವಾಗಿ ಪೂಜಿಸಬೇಕು, ಕುಮಾರಿ

ಕೆಯ ಹಸ್ತದಿಂದ ಸಿದ್ಧವಾದ ಗೋಸ ಥಾರಗ ಎ'ಯಿಂದ ಈ ಯಂತ್ರವನ್ನು ಯಾವ ಸ್ತ್ರೀಗೆ ಗರ್ಭ ನಿಲ್ಲಬೇಕೆಂದು ಬಯಸುತ್ತಿರುವಿರೋ ಅವಳ ಕೊರಳಿಗೆ ಕಟ್ಟಬೇಕು, ಇದರಿಂದ ಅವಳಲ್ಲಿ ಗರ್ಭವು ನಿಂತು ಶ್ರೀ ರಾಮಚಂದ್ರನಂತಹ ಪುತ್ರನು ಅತ್ಯವಶ್ಯವಾಗಿ ಜನಿಸುವದು ಖಾತ್ರಿ ಎಂದು ತಿಳಿಯಿರಿ.

### ಅಧಿಕ ಬೆಳೆ ದೊರಕಿಸುವದು

ಮಂಗಳವಾರ ಇಲ್ಲವೇ ರವಿವಾರ ಆರಿದ್ರಾ ನಕ್ಷತ್ರವಿರುವಂತಹ ಯೋಗವನ್ನು ಸಾಧಿಸಬೇಕು, ತದನಂತರ ಯಾರ ದೃಷ್ಟಿಗೂ ಬೀಳದಂತೆ ಮಾವಿನ ಗೊರಟವನ್ನು ತರಬೇಕು. ಅದನ್ನು ಮಂತ್ರದಿಂದ ಸಿದ್ಧಗೊಳಿಸಬೇಕು, ಹೊಲದಲ್ಲಿ ಅದನ್ನು ಹೂಳಬೇಕು, ಇದರಿಂದ ನಿಮ್ಮ ಹೊಲದಲ್ಲಿ ಅತ್ಯಧಿಕ ಅಂದರೆ ಎರಡು ಮೂರು ಪಟ್ಟು ಹೆಚ್ಚು ಬೆಳೆಯು ಬರುವದು.

### ಜ್ವರನಾಶಕ ಯಂತ್ರ

ವಿಳ್ಯದೆಲೆಯ ಮೇಲೆ ಈ ಯಂತ್ರವನ್ನು ಬರೆಯಬೇಕು. ಅರಿಷಣದಿಂದ ಬಾಭಿಳಿಗಿಡದ ಟೊಂಗೆಯಿಂದ ಇದನ್ನು ಬರೆಯಬೇಕು, ಅದನ್ನು ತದನಂತರ ವಿಧ್ಯುಕ್ತವಾಗಿ ಪೂಜಿಸಬೇಕು, ನಂತರ ಅದರ ಬೀಡಾ ತಯಾರಿಸಬೇಕು, ಮತ್ತು ಯಾರಿಗೆ ಜ್ವರಬಂದಿರುವದೋ ಅವರಿಗೆ ತಿನ್ನಲು ಕೊಡಬೇಕು, ಅವರಿಗೆ ಕೂಡಲೇ ಜ್ವರದತಾಪವಿಳಿದು ಜ್ವರನಾಶವಾಗುವದು ಅತ್ಯಂತ ಖಾತ್ರಿ ಎಂದು ತಿಳಿಯಿರಿ.



## ಮೂಡದ ಚಳಿಯ ನಿವಾರಕ ಯಂತ್ರ

| | | | |
|---|---|---|---|
| ೦ | ೦ | ೦ | ೦ |
| ೭೧ | ೭೧ | ೭೧ | ೦ |
| ೭೧ | ೭೧ | ೭೧ | ೦ |
| ೭೧ | ೭೧ | ೭೧ | ೦ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು, ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಯಾರಿಗೆ ಮೂರರ ಚಳಿಬರುವದೊ ಅಂಥವರ ಕೈಗೆ ಇದನ್ನು ಕಟ್ಟಬೇಕು, ಇದರಿಂದ ಮೂರರ ಚಳಿ ತಂತಾನೇ ನಿವಾರಣೆಹೊಂದುವದು ಅತಿ ಖಾತ್ರಿ ಎಂದು ತಿಳಿಯಿರಿ.

## ಜ್ವರನಾಶಕ ಯಂತ್ರ

| | | |
|---|---|---|
| ಹ್ರಿಂ | ಹ್ರಿಂ | ಹ್ರಿಂ |
| ಹ್ರಿಂ | ಹ್ರಿಂ | ಹ್ರಿಂ |
| ಹ್ರಿಂ | ಹ್ರಿಂ | ಹ್ರಿಂ |

ಭೋಜಪತ್ರದ ಮೇಲೆ ಗೋರೋಚನದಿಂದ ಈ ಯಂತ್ರವನ್ನು ಬರೆದು ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಯಾರಿಗೆ ಜ್ವರ ಬರುತ್ತಿರುವವೊ ಅವರ ಹೆಸರನ್ನು ಯಂತ್ರದ ಮೇಲ್ಭಾಗದಲ್ಲಿ ಬರೆಯಬೇಕು. ನಂತರ ಬಲಗೈಗೆ ಅದನ್ನು ಕಟ್ಟಬೇಕು. ಅದರಿಂದ ಅವನ ಜ್ವರ ನಿಲ್ಲುವದು ಅತ್ಯಂತ ಖಾತ್ರಿ ಎಂದು ತಿಳಿಯಬೇಕು,

## ಸರ್ವ ರೋಗ ನಾಶಕ ಯಂತ್ರ

| | | | |
|---|---|---|---|
| ೧೨ | ೨೦ | ೬೫ | ೭ |
| ೫ | ೬೧ | ೬ | ೬೦ |
| ೮೭ | ೧೩ | ೬೬ | ೬೬ |
| ೧೩ | ೭೫ | ೩ | ೪ |

ಕಾಗದದ ಮೇಲೆ ಈ ಯಂತ್ರವನ್ನು ಬರೆಯಬೇಕು. ಅದನ್ನು ಧೂಪ-ದೀಪಾದಿಗಳಿಂದ ವಿಧ್ಯುಕ್ತವಾಗಿ ಪೂಜಿಸಬೇಕು, ನಂತರ ರೋಗಿಯ ಎಡಭುಜಕ್ಕೆ ಇದನ್ನು ಕಟ್ಟಬೇಕು, ಅಂದರೆ ಅವನಿಗೆ ಯಾವದೇ ಬಗೆಯ ರೋಗವಿರಲಿ ಅವನುಗುಣ ಮುಖನಾಗುವನೆಂದು ತಿಳಿದು ಕೊಳ್ಳಬೇಕು, ಇದು ಎಲ್ಲ ರೋಗಗಳಿಗೆ ಪ್ರತಿಬಂಧಕೋಪಾಯವಾಗಿರುವದು,

## ಜ್ವರನಾಶಕ ಯಂತ್ರ

| | | | |
|---|---|---|---|
| ೯೩ | ೩೩ | ೧೫ | ೪೮ |
| ೪೩ | ೫ | ೪ | ೫೨ |
| ೪೪ | ೨೮ | ೮೮ | ೯೧ |
| ೪ | ೫ | ೩೧ | ೪೫ |

ಯಾರಿಗೆ ಜ್ವರ ಬರುತ್ತಿರುವವೋ ಅವರ ಕೊರಳಿಗೆ ಈ ಯಂತ್ರವನ್ನು ಕಟ್ಟಿದಲ್ಲಿ ಅವರ ಜ್ವರ ನಾಶವಾಗುವದಾಗಿ ತಿಳಿದುಕೊಳ್ಳಬೇಕು.

ಕಾಗದದ ಮೇಲೆ ಈ ಯಂತ್ರವನ್ನು ಬರೆಯಬೇಕು. ನೀಲಿಯ ವಸ್ತ್ರದ ತಾಯಿತವೊಂದನ್ನು ಸಿದ್ಧಪಡಿಸಬೇಕು. ಯಂತ್ರವನ್ನು ವಿಧ್ಯುಕ್ತವಾಗಿ ಪೂಜಿಸಿದ ನಂತರ ರೋಗಿಯ ಕೊರಳಿಗೆ ಅದನ್ನು ಕಟ್ಟಬೇಕು, ಅದರಿಂದ ಅವನಿಗೆ ಬರುತ್ತಿರುವ ಜ್ವರ ನಿಲ್ಲುವದು ಖಾತ್ರಿ ಎಂದು ತಿಳಿಯಬೇಕು.

## ನಾರಿಕಷ್ಟ ನಿವಾರಣ ಯಂತ್ರ

| | | | |
|---|---|---|---|
| ೨೬ | ೫೫ | ೯ | ೫೪ |
| ೮ | ೪೩ | ೬೧ | ೧೫ |
| ೫೭ | ೨೩ | ೮೭ | ೧೧ |
| ೮ | ೩೫ | ೮೪ | ೫೮ |

ಕತ್ತೆಯ ಎಲುವಿನ ಮೇಲೆ ಈ ಯಂತ್ರವನ್ನು ಬರೆದು ಯಾವ ಸ್ತ್ರೀಗೆ ಸಂಕಟವಾಗುತ್ತಿರುವದೋ ಅಂತಹವಳಿಗೆ ಟೊಂಕಕ್ಕೆ ಇದನ್ನು ಕಟ್ಟಬೇಕು, ಅಂದರೆ ಅವಳಿಗೆ ಯಾವದೇ ತರದ ತೊಂದರೆ ಆಗುವದಿಲ್ಲವೆಂದು ತಿಳಿದುಕೊಳ್ಳಬೇಕು

ಇದಲ್ಲದೇ ಕತ್ತೆಯ ಚರ್ಮದ ಮೇಲೆ ಕೇಸರಿ ಬಣ್ಣದಿಂದ ಬರೆದು ಯಾವ ಸ್ತ್ರೀಗೆ ಕಷ್ಟವಾಗುವದೋ ಅವಳ ಮನೆಯಲ್ಲಿರಿಸಿದರೆ ಅವಳ ಕಷ್ಟ ನಿವಾರಣೆಯಾಗುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ದೃಷ್ಟಿನಾಶಕ ಯಂತ್ರ

| | | | |
|---|---|---|---|
| ೪ | ೩ | ೬ | ೫ |
| ೩ | ೬ | ೮ | ೪ |
| ೬ | ೮ | ೪ | ೩ |
| ೮ | ೪ | ೩ | ೬ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಕೆಂಪು ಚಂದನದಿಂದ ಬರೆಯಬೇಕು. ಧೂಪ ದೀಪ ಹಾಗೂ ನೈವೇದ್ಯಗಳಿಂದ ಅದನ್ನು ವಿಧಿಪೂರ್ವಕವಾಗಿ ಪೂಜಿಸಬೇಕು, ತದನಂತರ ತಾಮ್ರದ ತಾಯಿತವನ್ನು ಸಿದ್ಧಪಡಿಸಿ ಅದರಲ್ಲಿ ಈ ಯಂತ್ರವನ್ನು ಸಿದ್ಧಪಡಿಸಿದ್ಧಂತೆಹಾಕಬೇಕು, ಈ ತಾಯಿತ

ವನ್ನು ಕೊರಳಲ್ಲಿ ಕಟ್ಟಿಕೊಳ್ಳಬೇಕು, ಇದರಿಂದ ದೃಷ್ಟಿಯು ಅತ್ಯವಶ್ಯವಾಗಿ ನಾಶವಾಗುವದೆಂದು ತಿಳಿದುಕೊಳ್ಳಬೇಕು.

## ದುಷ ಸ್ವಪ್ನನಾಶಕ ಯಂತ್ರ

| | | | |
|---|---|---|---|
| ದಂ | ಜಂ | ಯಂ | ಚಂ |
| ಧಂ | ಮಂ | ಷಂ | ನಂ |
| ಜಂ | ಘಂ | ಷಂ | ದಂ |
| ರಂ | ಸಂ | ಹ್ರೀಂ | ದಂ |

ಭೋಜಪತ್ರದ ಮೇಲೆ ಮೊದಲು ಈ ಯಂತ್ರವನ್ನು ಗೋಪಿಚಂದನ ದಿಂದ ಬರೆಯಬೇಕು, ತದನಂತರ ಧೂಪ ದೀಪಗಳಿಂದ ಅದನ್ನು ವಿಧಿ ಪೂರ್ವಕವಾಗಿ ಪೂಜಿಸಬೇಕು, ರಾತ್ರಿಯು ಕಾಲವಲ್ಲಿ. ಈ ಯಂತ್ರ ವನ್ನು ಹಾಸಿಗೆಯ ಕೆಳಗೆ ಇಟ್ಟು ಕೊಂಡು ಮಲಗಬೇಕು, ಅಂದರೆ ನಿಮಗೆ ಯಾವದೇ ರೀತಿಯುಲ್ಲಿ ದುಷ್ಟ ಸ್ವಪ್ನಗಳು ಬೀಳುವದಿಲ್ಲ, ಇದು ಖಂಡಿತವೆಂದು ತಿಳಿದುಕೊಳ್ಳಬೇಕು

## ಚಳಜ್ವರನಾಶಕ ಯಂತ್ರ

| | | | |
|---|---|---|---|
| ೧ | ೪ | ೩ | ೭ |
| ೩ | ೪ | ೭ | ೧೪ |
| ೫ | ೭ | ೫ | ೩ |
| ೬ | ೩ | ೧ | ೪೪ |

ಭೋಜಪತ್ರದ ಮೇಲೆ ಈ ಯಂತ್ರ ವನ್ನು ಬಹಳ ಹುಳಿಯಾಗಿರುವ ನಿಂಬೆಹಣ್ಣನ್ನು ತಂದು ಅದರ ರಸ ದಿಂದ ಬರೆಯಬೇಕು, ನಂತರ ವಿಧಿ ವಿಧಾನ ಪೂರ್ವಕವಾಗಿ ಪೂಜಿಸಿ ಧೂಪ ದೀಪಾದಿಗಳನ್ನು ಹೆಚ್ಚಬೇಕು, ಯಾರಿಗೆ ಚಳಿಜ್ವರ ಬರುತ್ತಿರುವದೋ, ಅವರ ಕೊರ ಳಿಗೆ ತಾಯಿತದಲ್ಲಿ ಹಾಕಿ ಇದನ್ನು

ಕಟ್ಟಬೇಕು, ಅಂದರೆ ಅವರಿಗೆ ಬರುವ ಚಳಿಜ್ವರದ ನಿವಾರಣೆಯಾಗುವದೆಂದು ತಿಳಿಯಬೇಕು.

## ಪ್ರಸವ ಸಮಯದಲ್ಲಿ ಸ್ತ್ರೀಗೆ ಕಷ್ಟವಾಗದಿರುವ ಯಂತ್ರ

| | | | |
|---|---|---|---|
| ೪ | ೫ | ೫ | ೭ |
| ೮ | ೪ | ೮ | ೧ |
| ೬ | ೩ | ೬ | ೩ |
| ೩ | ೯ | ೨ | ೭ |

ಭೋಜಪತ್ರದ ಮೇಲೆ ಗಂಗಾಜಲದಿಂದ ಈ ಯಂತ್ರವನು ಬರೆದು ನಂತರ ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು. ಇಪ್ಪತ್ತೊಂದು ದಿನಗಳ ವರೆಗೆ ಈ ಯಂತ್ರವನ್ನು ನೀರಲ್ಲಿ ತೊಳೆದು ಅದನ್ನು ಗರ್ಭವತಿ ಸ್ತ್ರೀಗೆ ಕುಡಿಯಲು ಕೊಡಬೇಕು. ಆದರಿಂದ ಅವರು ವಿಶೇಷ ಪ್ರಸವ ವೇದನೆಗೊಳಗಾಗುವದಿಲ್ಲವೆಂದು ತಿಳಿಯಬೇಕು.

## ಮನುಷ್ಯನನ್ನು ನಾಯಿಯನ್ನಾಗಿ ಮಾಡುವದು

ಈ ಸಾಧನೆಯ ಮಂತ್ರವು: ಓಂ ದರ್ಶನಯಾಜಾ ಕುಕ್ಕುದಪಲಾನಾ
ಖಾಟಂ ಲೋಳಿವಾಟಿ ಭುಂಕೆಹೇ ಸಿದ್ಧಹೋಮ

ಎಂದು ಇರುವದು. ಮೊದಲು ಸ್ಮಶಾನಕ್ಕೆ ಹೋಗಿ ಒಂದುಕಾಲ ಲಕ್ಷಸಲ ಈ ಮಂತ್ರವನ್ನು ಜಪಿಸಬೇಕು ಅಂದರೆ ಮಂತ್ರದ ಸಿದ್ಧಿಯಾಗುವದು, ನಂತರ ಒಂದು ಕರಿಧಾರವನ್ನು ತೆಗೆದುಕೊಂಡು ಈ ಮಂತ್ರದಿಂದ ಅದನ್ನು ಅಭಿಮಂತ್ರಿಸಬೇಕು, ಈ ಧಾರವನ್ನು ಯಾರ ಕೊರಳಲ್ಲಿ ಕಟ್ಟಲಾಗುವದೋ ಆ ಮನುಷ್ಯನು ನಾಯಿ ರೂಪವನ್ನು ತಾಳುವನು, ರಸ್ತೆಯಲ್ಲಿ ಅದೇ ರೀತಿ ತಿರುಗುವನು, ಮತ್ತು ಒದರುವನು, ಕೊರಳಲ್ಲಿಯ ದಾರವನ್ನು ಪುನಃ ತೆಗೆದಲ್ಲಿ ಪನಿಗೆ ಮೊದಲಿನ ಸ್ವರೂಪವು ಪ್ರಾಪ್ತವಾಗುವದೆಂದು ತಿಳಿಯಿರಿ

ಮಂತ್ರ ಸಿದ್ಧಿಯ ನಂತರ ಈ ಮೇಲಿನ ಮಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು, ಅದನ್ನು ಧೂಪ ದೀಪ ನೈವೇದ್ಯಾದಿಗಳಿಂದ ಪೂಜಿಸಬೇಕು, ತದನಂತರ ಕುಮಾರಿಕೆಯ ಕೈಯಿಂದ ಸಿದ್ಧವಾದ ದಾರವನ್ನು ತಂದು ಈ ಭೋಜಪತ್ರಕ್ಕೆ ಕಟ್ಟಬೇಕು, ಈ ದಾರವನ್ನು ಯಾರ ಕೊರಳಲ್ಲಿ ಕಟ್ಟಲಾಗಿರುವದೋ ಅವರು ನಾಯಿ ಸ್ವರೂಪವನ್ನು ಪಡೆಯುವರು ಕೊರಳಲ್ಲಿಯ ಈ ದಾರವನ್ನು ಪುನಃ ತೆಗೆದಲ್ಲಿ ಆ ಮನುಷ್ಯನು ಮೊದಲಿನ ರೂಪವನ್ನು ಪಡೆಯುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು, ಇದರಲ್ಲಿ ಯಾವ ಸಂದೇಹವೂ ಇಲ್ಲ.

## ಮನುಷ್ಯನನ್ನು ಗಿಳಿಯನ್ನಾಗಿ ಮಾಡುವದು

ಈ ಸಾಧನೆಯ ಮಂತ್ರ ಈ ರೀತಿಯಾಗಿರುವದು

ಓಂ ಆಹತಃ ಕಾಲಕಿಲ ಹರಿತ ರಕ್ತಪೀತ
ರಕ್ತಚೋಂಚ ಹಿ ಫಟ್ ಫಟ್ ಸ್ವಾಹಾ/

ಮಧ್ಯರಾತ್ರಿಯ ಕಾಲದಲ್ಲಿ ಈ ಮಂತ್ರವನ್ನು ಒಂದೂಕಾಲು ಲಕ್ಷಸಲ ಜಪಿಸಿದಲ್ಲಿ ಮಂತ್ರದ ಸಿದ್ಧಿಯು ಪ್ರಾಪ್ತಿಯಾಗುವದು, ತದನಂತರ ಈ ಮಂತ್ರವನ್ನು ಒಂದು ಭೋಜಪತ್ರದ ಮೇಲೆ ಬರೆಯಬೇಕು, ಅದನ್ನು ಧೂಪದೀಪಾದಿಗಳಿಂದ ಪೂಜಿಸಬೇಕು, ಅದನ್ನು ಕುಮಾರಿಕೆಯಿಂದ ಸಿದ್ಧವಾದ ದಾರದಿಂದ ಕಟ್ಟಬೇಕು. ನಂತರ ಇದನ್ನು ಯಾರ ಕೊರಳಲ್ಲಿ ಕಟ್ಟಿಿರೋ ಅವರು ಗಿಳಿಯಾಗಿ ಮಾರ್ಪಾಡು ಹೊಂದುವರು ಎಂದು ಭಾವಿಸಿರಿ.

ಈ ಪ್ರಯೋಗದ ಸಾಧನೆಯನ್ನು ೨೧ ದಿವಸಗಳ ವರೆಗೆ ಮಾಡಿದ ನಂತರ ಮಂತ್ರದ ಸಿದ್ಧಿಯು ದೊರೆಯುವದು, ಸಾಧಕನು ಸಾಧನೆಯ ಸಮಯದಲ್ಲಿ ಅತಿಶದ್ಧನೂ, ಶುಚಿರ್ಭೂತನೂ ಆಗಿರಬೇಕಲ್ಲದೇ ಪವಿತ್ರ ಆಚರಣೆಯುಳ್ಳವನಾಗಿರಬೇಕು, ನೀತಿ ನಿಯಮಗಳನ್ನೆಲ್ಲ ಸರಿಯಾಗಿ ಪಾಲಿಸುವವನಾಗಿರಬೇಕು, ಅಂದರೆ ಮಾತ್ರ ಇವರ ಸಿದ್ಧಿಯು ಬೇಗನೆ ದೊರೆಯುವದೆಂದು ತಿಳಿದುಕೊಳ್ಳಬೇಕು. ಈ ಮಂತ್ರವನ್ನು ಜಪಿಸುವದಕ್ಕಾಗಿ

ಹಿರಣ್ಯಮಣಿ ಜಪಮಾಲೆಯನ್ನು ಉಪಯೋಗಿಸಬೇಕು. ಈ ಎಲ್ಲ ಸಾಧನೆಗಳನ್ನು ಪ್ರಯೋಗಿಸುವಾಗ ಬಹಳ ಜಾಗರೂಕರಾಗಿರಬೇಕು. ಅಪ್ಪಿತಪ್ಪಿ ದುರುಪಯೋಗವಾದಲ್ಲಿ ಒಂದು ವ್ಯಕ್ತಿಯ ಜೀವನವೇ ಹಾಳಾಗುವದೆಂದೂ ತಿಳಿದುಕೊಳ್ಳಬೇಕು. ಈ ಸಾಧನೆಯಲ್ಲಿಯೂ ಕೊರಳಲ್ಲಿಯ ದಾರವನ್ನು ತೆಗೆದಕೂಡಲೇ ಆ ವ್ಯಕ್ತಿಗೆ ಮೊದಲಿನ ರೂಪವು ಬರುವದೆಂದು ತಿಳಿಯಿರಿ.

## ಮನುಷ್ಯನನ್ನು ಚಿಕ್ಕನ್ನಾಗಿ ಮಾರ್ಪಡಿಸುವ ವಿಧಾನ

ಈ ಸಾಧನೆಯ ಮಂತ್ರವು ಈ ರೀತಿಯಾಗಿರುವದು

ಓಂ ಪ್ರಫುಲ್ಲಿತ ಹೊಂಕಾರ ಜ್ವಾಲೆಜಲ ವಿಕಟವಾವದೆ ಸ್ವಾಹಾ!

ಬುಧವಾರ ಅಥವಾ ಶುಕ್ರವಾರ ಇವುಗಳಲ್ಲಿ ಒಂದು ದಿನ ಒಂದು ವಿಶಾಲವಾದ ಗಿಡದ ನೆರಳಲ್ಲಿ ಕೂತುಕೊಳ್ಳಬೇಕು. ಈ ಮೇಲೆ ಹೇಳಿದ ಮಂತ್ರವನ್ನು ಐದು-ಆರು ತಾಸುಗಳ ವರೆಗೆ ಜಪಿಸಬೇಕು. ತದನಂತರ ಈ ಮಂತ್ರವನ್ನು ಭೋಜಪತ್ರದ ಮೇಲೆ ಬರೆಯಬೇಕು. ಅದನ್ನು ಕೈಯಲ್ಲಿ ಹಿಡಿದುಕೊಂಡು ಸಮಿ ಸಮೀಪದ ಐದು ಗಿಡಗಳ ಕೆಳಗೆ ಹೋಗಿ ಕುಳಿತುಕೊಂಡು ಈ ಮಂತ್ರದಿಂದ ಜಪವನ್ನು ಮಾಡಬೇಕು. ಪ್ರತಿಯೊಂದು ಸ್ಥಳದಲ್ಲಿಯೂ ಹೋಮ ಕರ್ಮಾದಿಗಳನ್ನು ನಡೆಸಿ ಮಂತ್ರ ಯಶ ಕೊಡಬೇಕೆಂದು ಪ್ರಾರ್ಥಿಸಿಕೊಳ್ಳಬೇಕು. ಈ ರೀತಿಯಾಗಿ ಮಾಡಿದ ನಂತರ ಮಧ್ಯರಾತ್ರಿಯ ಹೊತ್ತಿಗೆ ಮನೆಗೆ ಹೋಗಬೇಕು. ಮನೆಯಲ್ಲಿ ಸ್ವತಃ ವಾಸನೆ ಅಕ್ಕಿಯಿಂದ ಅನ್ನ ಮಾಡಿ ಹಾಲು ತುಪ್ಪಗಳೊಂದಿಗೆ ಮಾತ್ರ ಭೋಜನ ಮಾಡಬೇಕು. ಇಷ್ಟಾದ ನಂತರ ಮೌನವ್ರತವನ್ನು ಧರಿಸಿ ಪುನಃ ಈ ಐದೂ ಗಿಡಗಳ ಬಳಿಗೆ ಹೋಗಬೇಕು. ಅವುಗಳ ಐದೈದು ಎಲೆಗಳನ್ನು ತೆಗೆದುಕೊಂಡು ಒಂದು ಉಣ್ಣುವ ಎಲೆಯಾಕಾರದ ಎಲೆಯನ್ನು ಸಿದ್ಧಪಡಿಸಬೇಕು. ಈ ಎಲೆಯೊಂದಿಗೆ ಸ್ಮಶಾನಕ್ಕೆ ಹೋಗಬೇಕು. ಅಲ್ಲಿ ಅದರಲ್ಲಿ ಪ್ರೇತದ ಅವಶೇಷವನ್ನು ತೆಗೆದುಕೊಂಡು ಬರಬೇಕು. ಅಲ್ಲಿಂದ ನದೀತೀರಕ್ಕೆ ಹೋಗಬೇಕು. ಎರಡೂ ದಂಡೆಯ ಮಣ್ಣನ್ನು ತರಬೇಕು. ನದಿ ನೀರಿನಿಂದ ಕೆಸರನ್ನು ತಯಾರಿಸಿ ಅದರಿಂದ ಒಂದು ಚಿಕ್ಕನ್ನು ನಿರ್ಮಿಸ

ಬೇಕು. ತದನಂತರ ಒಂದು ಬಿಳಿಯ ಶುಭ್ರವಾದ ಕೋಲನ್ನು ತರಬೇಕು. ಈ ಕೋಲನ್ನು ಮೊದಲು ಅಭಿಮಂತ್ರಿಸಬೇಕು. ನಂತರ ಈ ಕೋಲಿನಿಂದ ಮಣ್ಣಿನ ಬೆಕ್ಕಿನ ಮೇಲೆ ತಿರುವುತ್ತ ತಿರುವುತ್ತ ಕೂಡಬೇಕು. ಈ ರೀತಿ ಯಲ್ಲಿ ತಿರುವುವಿನ ಮುಂದೆ ಈ ಮೇಲೆ ಹೇಳಿರುವ ಮಂತ್ರವನ್ನು ಉಚ್ಚರಿ ಸುತ್ತ ಇರಬೇಕು. ಕೆಲವೊಂದು ಹೊತ್ತಿನ ನಂತರ ಮಣ್ಣಿನಿಂದ ಸಿದ್ದ ಪಡಿ ಸಿದ ಬೆಕ್ಕು ಕೆಂಪಗಾಗುವದು. ಆ ಹೊತ್ತಿಗೆ ಈ ಮಂತ್ರದ ಸಿದ್ದಿಯಾಗಿದೆ ಎಂದು ತಿಳಿಯಬೇಕು. ಅಲ್ಲದೇ ಈ ಕೋಲು ಸಹ ಮಂತ್ರದಂಡವಾಗಿ ಮಾರ್ಪಟ್ಟಿದೆ ಎಂದು ತಿಳಿದುಕೊಳ್ಳಬೇಕು. ಇಷ್ಟಾದ ನಂತರ ನೀವು ಇದನ್ನು ಮನುಷ್ಯರ ಮೇಲೆ ಪ್ರಯೋಗಿಸಲು ಯಾವದೇ ಅಡ್ಡಿ ಆತಂಕಗಳು ಇಲ್ಲವೆಂದು ತಿಳಿಯಬೇಕು. ನೀವು ಯಾವ ಸ್ತ್ರೀ ಅಥವಾ ಪುರುಷನನ್ನು ಬೆಕ್ಕನ್ನಾಗಿ ಮಾರ್ಪಡಿಸಬೇಕೆಂದು ಬಯಸುತ್ತಿರುವಿರೋ ಅವರ ತಲೆಯ ಮೇಲೆ ಈ ಮಂತ್ರದಂಡದಿಂದ ಮೇಲಿನ ಮಂತ್ರವನ್ನು ಉಚ್ಚರಿಸುತ್ತ ಏಳು ಸಲ ತಿರುವುಬೇಕು. ಅಂದರೆ ಆ ವ್ಯಕ್ತಿಯು ಬೆಕ್ಕಾಗಿ ಮಾರ್ಪಡುವದು ಅತ್ಯಂತ ಖಾತ್ರಿಯಾಗಿರುವದೆಂದು ತಿಳಿದುಕೊಳ್ಳಬೇಕು. ಆದರೆ ಈ ರೀತಿ ಪ್ರಯೋಗಿಸುವಾಗ ಅನವಶ್ಯಕ. ಯಾವದೇ ಒಂದು ವ್ಯಕ್ತಿಗೆ ಹಾನಿ ಇಲ್ಲವೇ ತೊಂದರೆಯಾಗದಂತೆ ನೋಡಿಕೊಳ್ಳುವದು ಅತ್ಯಂತ ಅವಶ್ಯವಿದೆ.

## ಪುತ್ರಪ್ರಾಪ್ತಿ ಸಾಧನೆಯು

ಅಶ್ವಿನಿ ನಕ್ಷತ್ರದ ಸಮಯದಲ್ಲಿ ಬೆಲಪತ್ರಿಯ ಬೇರನ್ನು ತರಬೇಕು. ಅದನ್ನು ಆಕಳ ಹಾಲಿನಲ್ಲಿ ತೇಯಿದು ಗರ್ಭವತಿಯಾದ ಸ್ತ್ರೀಗೆ ಕುಡಿಯಲು ಕೊಡಬೇಕು. ಅಂದರೆ ಅವಳಿಗೆ ಕೀರ್ತಿವಂತನಾದ ಪುತ್ರನು ಜನಿಸುವದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಪಶುರೋಗ ನಾಶಕ

ಅಶ್ವಿನಿ ನಕ್ಷತ್ರದ ದಿವಸದಂದು ಪೂಂಟಕಚಾರಿ ಬೇರನ್ನು ತಂದು ಅದನ್ನು ಯಾವ ಪಶು ರೋಗದಿಂದ ಬಳಲುತ್ತಿರುವದೋ ಆ ಪಶುವಿನ

ಕೊರಳಿಗೆ ಕಟ್ಟಬೇಕು. ಅಂದರೆ ಆ ಪಶುವಿನ ರೋಗವು ಅತ್ಯಂತ ಖಾತ್ರಿಯಿಂದ ನಿವಾರಣೆ ಹೊಂದುವದೆಂದು ತಿಳಿದುಕೊಳ್ಳಬೇಕು.

## ಅಗ್ನಿಯಲ್ಲಿ ಹಾಯ್ದು ಪಾರಾಗುವದು

ತುರಟಿ, ಸೈಂಧ ಲವಣ, ಉಪ್ಪು, ಕೋಳಿತತ್ತಿಯ ಮೇಲ್ಭಾಗ, ಪಾರಾ ಜಾತಿಯ ಹಣ್ಣು, ಅಫು ಇವನ್ನು ಸಮಭಾಗದಲ್ಲಿ ತೆಗೆದುಕೊಂಡು ಒಂದುಗೂಡಿಸಬೇಕು. ಅದನ್ನು ಅಂಗೈಗೆ ಲೇಪಿಸಿಕೊಂಡು ನಂತರ ಅದನ್ನು ಬೆಂಕಿಯಲ್ಲಿ ಹಿಡಿಯಬೇಕು. ಕೈ ಸ್ವಲ್ಪ ಸಹ ಸುಡುವದಿಲ್ಲವೆಂದು ಕಂಡು ಬರುವದು

ಬಾಳಿಗಿಡದ ಬೇರು ಮತ್ತು ಹೆಣ್ಣು ಕಪ್ಪೆಯ ಚರಬಿಯನ್ನು ಒಂದುಗೂಡಿಸಿ ಅಗ್ನಿಯ ಮೇಲೆ ಕಾಯಿಸಬೇಕು. ಅದನ್ನು ಅಂಗಾಲಿಗೆ ಚೆನ್ನಾಗಿ ಲೇಪಿಸಿಕೊಳ್ಳಬೇಕು. ತದನಂತರ ಬೆಂಕಿಯಲ್ಲಿ ನಿರ್ಭೀತರಾಗಿ ಅಡ್ಡಾಡಬಹುದಾಗಿರುವದು. ಕಾಲಿಗೆ ಯಾವದೇ ತರದ ಬಿಸಿ ಸೆಕೆ ತಾಗುವದಿಲ್ಲವೆಂದು ತಿಳಿಯಬೇಕು.

## ಶರೀರ ರಕ್ಷಣ ಮಂತ್ರ

ಪರಬ್ರಹ್ಮ ಪರಮಾತ್ಮನೆ ಮಮ ಶರೀರ ರಕ್ಷಾ ಕುರು ಸ್ವಾಹಾ|

ಈ ಮಂತ್ರವನ್ನು ೧೦ ಸಾವಿರ ಸಲ ಜಪಿಸಿದಲ್ಲಿ ಮಂತ್ರ ಸಿದ್ಧಿಯು ದೊರೆಯುವದು. ಯಾವ ಕಾಲಕ್ಕೆ ಇದರ ಪ್ರಯೋಗವನ್ನು ಮಾಡುವದಿದೆಯೋ ಆ ಕಾಲಕ್ಕೆ ೧೦೮ ಸಲ ಇದನ್ನು ಜಪಿಸಿ ನಂತರ ಪ್ರಯೋಗ ಮಾಡಬೇಕು. ಈ ಮಂತ್ರ ಸಿದ್ಧಿಯ ನಂತರ ಇಂದ್ರಜಾಲಿಕನು ಯಾವದಾದರೂ ತಂತ್ರ ಮಂತ್ರವನ್ನು ಮರೆತರೂ ಸಹ ಅವನಿಗೆ ಅದರಿಂದ ಹಾನಿ ತಟ್ಟುವದಿಲ್ಲವೆಂದು ತಿಳಿಯಬೇಕು.

## ಇಂದ್ರಜಾಲ ಮಂತ್ರ

ನಾರಾಯಣಾಯ ವಿಶ್ವಂಭರಾಯ ಇಂದ್ರಜಾಲ ಕೌತುಕಾನಿ
ದರ್ಶಯ ಸಿದ್ಧ ಕುರು ಕುರು ಸ್ವಾಹಾ|

ಒಂದುಲಕ್ಷ ಸಲ ಜಪಿಸಿದಲ್ಲಿ ಈ ಮಂತ್ರದ ಸಿದ್ಧಿಯು ಪ್ರಾಪ್ತವಾಗುವದು. ಮುಂದೆ ಇಂದ್ರಜಾಲ ಕಾರ್ಯದಲ್ಲಿ ತೊಡಗುವಾಗ ಈ ಮಂತ್ರ ಹಾಗೂ ದೇಹ ರಕ್ಷಾ ಮಂತ್ರವನ್ನು ೧೦೮ ಸಲ ಜಪಿಸಬೇಕು. ಆಗ ಅವನ ಇಂದ್ರಜಾಲ ಕರ್ಮವು ನಿರ್ವಿಘ್ನವಾಗಿ ಸಾಗುವದೆಂದು ತಿಳಿಯಬೇಕು

## ಗುಲಾಬಿಹೂವುಗಳ ಬಣ್ಣವನ್ನು ಬದಲಾಯಿಸುವದು

ಕೈಯಲ್ಲಿ ಒಂದು ಗುಲಾಬಿ ಹೂವನ್ನು ತೆಗೆದುಕೊಳ್ಳಬೇಕು, ಅದಕ್ಕೆ ಗಂಧಕದ ಹೊಗೆಯು ಬರುವಂತೆ ಮಾಡಬೇಕು. ಬೆಂಕಿಯಲ್ಲಿ ಗಂಧಕವನ್ನು ಹಾಕಿದರೆ ಹೊಗೆಯು ಹೊರಡುವದು. ಗಂಧಕದ ಹೊಗೆಯುಬಡಿದ ಗುಲಾಬಿಹೂವಿನ ಬಣ್ಣವು ನೀಲಿಯಾಗುವದು.

## ನೀರು ಗಟ್ಟಿಯಾಗುವದು

ಕಾಮಕಸ್ತೂರಿಯಬೀಜಗಳಿಂದ ಚೂರ್ಣವನ್ನು ಮಾಡಿಟ್ಟುಕೊಂಡಿರಬೇಕು ಅದನ್ನು ನೀರಲ್ಲಿ ಹಾಕಲು ನೀರು ಗಟ್ಟಿಯಾಗುವದೆಂದುತಿಳಿಯಿರಿ

## ನಿಂಬೆಹಣ್ಣಿನಲ್ಲಿ ರಕ್ತಬರಿಸುವದು

ಯಾವದಾದರೊಂದು ಚಾಕು ಇಲ್ಲವೇ ಚೂರಿಯನ್ನು ತೆಗೆದುಕೊಂಡು ಅದಕ್ಕೆ ಫಣಸ ಹಣ್ಣಿನ ಅರ್ಕವನ್ನು ಮೂರು ನಾಲ್ಕುಸಲ ಜಪಿಸಬೇಕು. ಪ್ರತಿಸಲವೂ ಹಚ್ಚಿ ಪ್ರತ್ಯೇಕವಾಗಿ ಒಣಗಿಸಬೇಕು. ನಂತರ ಒಂದುಲಿಂಬೆ ಹಣ್ಣನ್ನು ತೆಗೆದುಕೊಂಡು ಇದರಿಂದ ಎರಡು ತುಣುಕು ಮಾಡಬೇಕು. ಆಗ ಆ ರಸವು ಈ ಅರ್ಕದ ಪರಿಣಾಮವಾಗಿ ರಕ್ತದಂತೆ ಕಂಡು ಬರುವದು.

## ನೀರಿನಲ್ಲಿ ಬೆಂಕಿ ಹುಟ್ಟುವದು

ಗಂಧಕ ಹಾಗೂ ನವಸಾಗರವನ್ನು ಒಂದುಗೂಡಿಸಿ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು. ಅದರ ಮೇಲೆ ನೀರು ಹಾಕಲಾಗಿ ಕೂಡಲೇ ಬೆಂಕಿ ಹತ್ತಿದಂತೆ ಕಂಡು ಬರುವದು.

## ಬಟ್ಟೆಗೆ ಬೆಂಕಿ ಹತ್ತಿದರೂ ಸುಡದಿರುವದು

ಬಟ್ಟೆಗಳನ್ನು ಸೆರೆಯಲ್ಲಿ ಹಾಕಿ ಚೆನ್ನಾಗಿ ಅಲುಗಾಡಿಸಬೇಕು. ನಂತರ ಪ್ರಯೋಗ ಕಾಲದಲ್ಲಿ ಅವುಗಳಿಗೆ ಬೆಂಕಿ ಹಚ್ಚಲಾಗಿ ಬಟ್ಟೆಗಳು ಸುಡುವದಿಲ್ಲ. ಆದರೆ ಬಟ್ಟೆಗಳಿಗೆ ಲೇಪಿಸಿದರೆ ಸೆರೆಯು ಲೇಪನ ಮುಗಿವ ಮೊದಲೇ ಬೆಂಕಿಯನ್ನು ಆರಿಸಬೇಕೆಂಬದನ್ನು ಲಕ್ಷ್ಯದಲ್ಲಿರಿಸಿಕೊಳ್ಳಬೇಕು.

## ನೀರನ್ನು ಹಾಲನ್ನಾಗಿ ಮಾಡುವದು

. ಔಡಲಬೀಜದಲ್ಲಿಯ ತಿಳಲನ್ನು ತೆಗೆದುಕೊಳ್ಳಬೇಕು. ಅದನ್ನು ನೀರಿನಲ್ಲಿ ಚೆನ್ನಾಗಿ ಬೆರೆಸಬೇಕು, ಅದನ್ನು ಪಾತ್ರೆಯ ಸುತ್ತಲೂ ಹಚ್ಚಬೇಕು. ನಂತರ ಆ ಪಾತ್ರೆಯನ್ನು ಸ್ವಲ್ಪಸ್ವಲ್ಪವಾಗಿ ಒಣಗಿಸಬೇಕು, ಪ್ರಯೋಗವನ್ನು ಮಾಡುವ ಸಮಯದಲ್ಲಿ ಆ ಪಾತ್ರೆಯಲ್ಲಿ ನೀರನ್ನು ಹಾಕಬೇಕು. ಅಂದರೆ ಆ ನೀರು ಹಾಲಿನ ಬಣ್ಣವನ್ನು ತಳೆಯುವದು ಕಂಡು ಬರುವದು.

## ಹಗಲಿನಲ್ಲಿ ನಕ್ಷತ್ರಗಳು ಕಾಣುವದು

ಒಬ್ಬ ಒಂಬತ್ತು ಹತ್ತು ವರ್ಷದ ಹುಡುಗನನ್ನು ಕರೆತರಬೇಕು. ಅವನಿಗೆ ಪ್ರತಿದಿನ ಮೂರು ತೊಲೆಗಳಷ್ಟು ಬಡೆಸೋಪನ್ನು ತಿನ್ನಲು ಕೊಡಬೇಕು ಈ ರೀತಿ ೪೧ ದಿವಸಗಳ ವರೆಗೆ ಪ್ರಯೋಗ ಮಾಡಬೇಕು, ೪೨ನೇ ದಿವಸ ಆ ಹುಡುಗನಿಗೆ ಹಗಲು ಹೊತ್ತಿನಲ್ಲಿಯೇ ಆಕಾಶದಲ್ಲಿಯ ನಕ್ಷತ್ರಗಳು ಕಾಣತೊಡಗುವದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಬಟ್ಟೆಗಳಿಗೆ ಬೆಂಕಿ ಹತ್ತಿದರೂ ಸುಡದಿರುವದು

ಕರ್ಪೂರ ಸೆರೆ ಇಲ್ಲವೇ ಸ್ಪಿರಿಟನ್ನು ಒಂದುಗೂಡಿಸಿ ಒಂದು ಮಿಶ್ರಣವನ್ನು ಸಿದ್ಧಪಡಿಸಬೇಕು. ಅದರಲ್ಲಿ ಬಟ್ಟೆಗಳನ್ನು ಚೆನ್ನಾಗಿ ಎದ್ದಿ ಸರಿಯಾಗಿ ಲೇಪನವಾಗುವಂತೆ ನೋಡಿಕೊಳ್ಳಬೇಕು. ತದನಂತರ ಈ ಬಟ್ಟೆಗಳನ್ನು ನೆಲದ ಮೇಲೆ ಪಸರಿಸಬೇಕು, ಅವುಗಳಿಗೆ ಆಗ ಬೆಂಕಿಯನ್ನು ಹಚ್ಚಬೇಕು, ಬೆಂಕಿಯು ಹತ್ತುವದಾದರೂ ಬಟ್ಟೆಗಳು ಸುಡುವದಿಲ್ಲ, ಆದರೆ ಲೇಪನ ತೀರುವ ಮೊದಲೇ ಬೆಂಕಿಯನ್ನು ಆರಿಸುವದನ್ನು ಮಾತ್ರ ಮರೆಯಬಾರದು.

## ಹೂವುಗಳ ಬಣ್ಣ ಬದಲಾಯಿಸುವದು

ಗಂಧಕದ ಹೊಗೆಯನ್ನು ಕೊಟ್ಟಲ್ಲಿ ಯಾವದೇ ಹೂವಿನ ಬಣ್ಣವು ಬದಲಾಗುವದು. ಬಣ್ಣ ಬದಲಾದ ಹೂವುಗಳನ್ನು ಕೆಲವೇಳೆಯ ಮೇರೆಗೆ ನೀರಿನಲ್ಲಿ ಇಡಲಾಗಿ ಅವುಗಳಿಗೆ ಮೊದಲಿನ ಬಣ್ಣವು ಬರುವದು.

ಡಾಳಿಂಬರದ ಬಣ್ಣವು ಗಂಧಕದ ಹೊಗೆಯನ್ನು ಕೊಡಲಾಗಿಬಿಳಿಯ ಸ್ವರೂಪವನ್ನು ಪಡೆಯುವದು.

ನೀಲಿ ಇಲ್ಲವೇ ಕೆಂಪುಬಣ್ಣದ ಹೂವುಗಳನ್ನು ಅಮೋನಿಯಾದಹೊಗೆಯನ್ನು ಕೊಟ್ಟಲ್ಲಿ ಮತ್ತು ಅವನ್ನು ನೀರಲ್ಲಿ ಹಾಕಿಡಲಾಗಿ ಅವುಗಳ ಬಣ್ಣವು ಬೂದುಬಣ್ಣದ ಸ್ವರೂಪವನ್ನು ಪಡೆಯುವದು.

ಬಿಳಿಬಣ್ಣದ ಹೂವುಗಳ ಮೇಲೆ ಈ ಪ್ರಯೋಗವನ್ನು ಮಾಡಲಾಗಿ ಅವು ಹಳದಿಬಣ್ಣದವಾಗುವವು.

ಹಳದಿಹೂವುಗಳಿಗೆ ಗಂಧಕದ ಹೊಗೆಯನ್ನು ಕೊಡಲಾಗಿ ಅವು ಬಿಳಿ ಬಣ್ಣದವಾಗುವವೆಂದು ತಿಳಿದುಕೊಳ್ಳಬೇಕು.

ಕೆಂಪುಬಣ್ಣದ ಕಣಗಲ ಹೂವಿಗೆ ಗಂಧಕದ ಹೊಗೆಯನ್ನು ಕೊಟ್ಟಲ್ಲಿ ಅದು ಬಿಳಿಬಣ್ಣದ್ದಾಗುವದು. ತುರಚಿಯ ನೀರು ಸಿಂಪಡಿಸಲಾಗಿ ಪುನಃ ಅದು ಕೆಂಪುಬಣ್ಣದ್ದಾಗುವದು.

## ಜಾದೂ ಉಂಗುರ

ಒಂದೆರಡು ಮೂರು ಉದ್ದವಾದ ದಾರವನ್ನು ತೆಗೆದುಕೊಳ್ಳಬೇಕು. ಅದನ್ನು ಲವಂಗದ ನೀರಿನಲ್ಲಿ ಇಲ್ಲವೇ ಉಪ್ಪಿನ ನೀರಿನಲ್ಲಿ ಕೆಲಹೊತ್ತು ಎದ್ದಿ ನಂತರ ಚೆನ್ನಾಗಿ ಒಣಗಿಸಬೇಕು. ಈ ದಾರಕ್ಕೆ ಒಂದು ಹಗುರಾದ ಉಂಗುರವನ್ನು ಕಟ್ಟಬೇಕು. ತದನಂತರ ಈ ದಾರವನ್ನು ಒಂದುವಸ್ತುವಿಗೆ ಬಿಗಿಯಾಗಿ ಕಟ್ಟಿ ನಿಲ್ಲಿಸಬೇಕು. ಈ ದಾರಕ್ಕೆ ಈಗ ಬೆಂಕಿಯನ್ನು ಹಚ್ಚ

ಬೇಕು, ಆಗ ಆ ದಾರವು ಉರಿಯ ತೊಡಗುವದಲ್ಲದೇ ಉಂಗುರವು ಮಾತ್ರ ಹಾಗೇ ಅಲ್ಲಾಡುತ್ತ ನಿಲ್ಲುವದೆಂದು ತಿಳಿಯಬೇಕು.

## ಗಾಳಿಯಿಂದ ಬೆಂಕಿ ಹುಟ್ಟಿಸುವದು

ಗ ರವಾರ ಅಥವಾ ಆದಿತ್ಯವಾರ ಗ್ರಹಣವಾದ ಕಾಲದಲ್ಲಿ ಸಾಮಾನ್ಯವಾಗಿ ಜನ್ಮತಳೆದ ಒಂಟೆಗಳ ಹಿಕ್ಕೆಗಳನ್ನು ತೆಗೆದುಕೊಳ್ಳಬೇಕು. ಅವನ್ನು ಅತಿ ಕೆಂಪಾಗಿರುವ ಜೇನುತುಪ್ಪದಲ್ಲಿ ಸೇರಿಸಿ ಕಲಸಬೇಕು. ನಂತರ ಅದನ್ನು ಒಣಗಿಸಿ ಒಂದು ಡಬ್ಬಿಯಲ್ಲಿ ಹಾಕಿ ಮುಚ್ಚಿಡಬೇಕು, ಪ್ರಯೋಗ ಮಾಡುವ ಕಾಲದಲ್ಲಿ ಈ ಡಬ್ಬಿಯಲ್ಲಿಂದ ಒಂದು ಒಣಗಿದಂತಹ ಹಿಕ್ಕೆಯನ್ನು ಹೊರಗೆ ತೆಗೆದು ಮೇಜಿನ ಮೇಲೆ ಗಾಳಿಯು ಅದಕ್ಕೆ ಜೋರಾಗಿ ಬಡಿಯುವಂತೆ ಇಡಬೇಕು, ಆಗ ಅದಕ್ಕೆ ಬೆಂಕಿ ಹತ್ತುವದನ್ನು ನೀವು ಕಾಣಬಹುದು.

## ನೀರ ಮೇಲೆ ನಡೆಯುವದು

ಟೆಂಟು ಎಂಬ ಒಂದು ಜಾತಿಯ ಗಿಡವಿರುವದು ಅದರ ಕಟ್ಟಿಗೆಯನ್ನು ತಂದು ಅದರಿಂದ ನಿಮ್ಮ ಕಾಲಿನ ಅಳತೆಗೆ ಸರಿಯಾಗುವಂತೆ ಆವುಗೆಗಳನ್ನು ಸಿದ್ಧಪಡಿಸಬೇಕು. ನೀವು ಅವನ್ನು ಹಾಕಿಕೊಂಡು ನೀರಿನಲ್ಲಿ ನಡೆದರೆ ಮುಳುಗುವ ಭೀತಿ ಇರುವದಿಲ್ಲ.

## ಸತ್ತ ಪಕ್ಷಿಯನ್ನು ಜೀವಂತಗೊಳಿಸುವದು

ಒಂದು ಸಜೀವ ಪಕ್ಷಿಯನ್ನು ಹಿಡಿದುಕೊಂಡು ಬರಬೇಕು. ನಂತರ ಅದರ ಪಕ್ಕಗಳನ್ನು ಕಟ್ಟಿ ಹಾರಲು ಬರದಂತೆ ಮಾಡಬೇಕು. ಪ್ರೇಕ್ಷಕರಿಗೆ ಅದು ಜೀವಂತವಾಗಿರುವನ್ನು ಮೊದಲು ಪರಿಚಯ ಮಾಡಿಕೊಡಬೇಕು. ತದನಂತರ ಅದನ್ನು ಮೇಜಿನ ಮೇಲಿಡಬೇಕು. ಒಂದು ಪಿಸ್ತೂಲಿನಲ್ಲಿ ಸ್ವಲ್ಪಮದ್ದು ತೆಗೆದುಕೊಂಡು ಅದರ ಮೇಲೆ ವಿಶಿಷ್ಟ ತಯಾರಿಕೆಯ ಗುಳಿಗೆಗಳನ್ನು ತುಂಬಬೇಕು. ನಂತರ ಪಕ್ಷಿಗೆ ಗುಂಡು ಹೊಡೆದಂತೆ ಮಾಡಬೇಕು ಕೇವಲ ಶಬ್ದ ಮಾತ್ರದಿಂದ ಅದು ಮೂರ್ಛೆ ಹೋಗುವದು. ಆಗ ಪ್ರೇಕ್ಷ

ಕರಿಗೆ ಅದು ಸತ್ತಿರುವದೆಂದು ತೋರಿಸಬೇಕು. ತದನಂತರ ನೀವು ಮಂತ್ರ ತಂತ್ರವನ್ನು ಮಾಡುತ್ತಿರುವರೆಂಬಂತೆ ನಟಿಸುತ್ತ ನಿಲ್ಲಬೇಕು. ಅಲ್ಲದೇ ಆ ಪಕ್ಷಿಯ ಮೇಲೆ ಜಾದೂ ದಂಡವನ್ನು ತಿರುವುತ್ತ ಹೋಗಬೇಕು. ಕೆಲ ಹೊತ್ತಿನಲ್ಲಿಯೇ ಈ ಪಕ್ಷಿಯನ್ನು ಜೀವಂತ ಮಾಡುವದಾಗಿ ಪ್ರೇಕ್ಷಕರಿಗೆ ಹೇಳಬೇಕು. ಕೆಲ ಹೊತ್ತಿನಲ್ಲಿಯೇ ಈ ಪಕ್ಷಿಯು ಶುದ್ಧಿಯ ಮೇಲೆ ಬರುವದು. ಮತ್ತು ಜೀವಂತವಾಗಿರುವ ನಿದರ್ಶನವನ್ನುಂಟು ಮಾಡುವದು. ಆಗ ನೀವು ಪಕ್ಷಿಪುನಃ ಜೀವಪಡೆಯಿತೆಂದು ಪ್ರೇಕ್ಷಕರಿಗೆತಿಳಿಸಬೇಕು ಒಂದು ವೇಳೆ ಪಕ್ಷಿಯು ಬೇಗನೆ ಶುದ್ಧಿಯ ಮೇಲೆ ಬರದಿದ್ದರೆ ಅದರ ತಲೆ ಹೊಟ್ಟೆ ಹಾಗೂ ಗುರದ್ವಾರದ ಮೇಲೆ ತಣ್ಣೀರನ್ನು ಹಾಕಬೇಕು. ಅಂದರೆ ಬೇಗ ಶುದ್ಧಿಯ ಮೇಲ ಬರುವದು. ಅದು ಶುದ್ಧಿಯ ಮೇಲೆ ಬರುವವರೆಗೆ ನೀವು ಮಂತ್ರ ತಂತ್ರ ನಡೆಸುತ್ತಲೇ ಇರಬೇಕು. (ಪಾರಾ ಹಾಗೂ ನೋರಚೂರದಲ್ಲಿ ನೀರು ಸೇರಿಸಿ ಈ ಮಿಶ್ರಣದಿಂದ ಗುಳಿಗೆಗಳನ್ನು ಸಿದ್ಧಪಡಿಸಿ ಇವನ್ನು ಪಿಸ್ತೂಲಿನಲ್ಲಿ ತುಂಬುವದಕ್ಕಾಗಿ ಉಪಯೋಗಿಸಿಕೊಳ್ಳಬೇಕು)

## ನೀರನ್ನು ಭರ್ಪವನ್ನಾಗಿ ಮಾಡುವದು

ಒಂದು ಮಣ್ಣಿನ ಪಾತ್ರೆಯಲ್ಲಿ ನೀರು ತೆಗೆದುಕೊಳ್ಳಬೇಕು. ಅದರಲ್ಲಿ ಪಿಲು ಎಂಬ ಒಂದು ಜಾತಿಯ ಗಿಡದ ಎಲೆಯಿಂದ ಸಿದ್ಧಪಡಿಸಿದ ಚೂರ್ಣವನ್ನು ಹಾಕಬೇಕು. ಆಗ ಆ ನೀರು ಭರ್ಫದಂತೆ ಅತಿಗಟ್ಟಿಯಾಗುವದೆಂದು ತಿಳಿದುಕೊಳ್ಳಬೇಕು.

## ತಾಮ್ರವನ್ನು ಬೆಳ್ಳಿ ಮಾಡುವದು

ಹಳೇ ಮಣ್ಣಿನಲ್ಲಿ ಪಾರಜವನ್ನು ಮೊದಲು ಕೂಡಿಸಿಕೊಳ್ಳಬೇಕು, ಮುಂದೆ ತಾಮ್ರದ ತಗಡನ್ನು ತೆಗೆದುಕೊಂಡು ಪ್ರೇಕ್ಷಕರಿಗೆ ಇದೋನೋಡಿರಿ ಇದನ್ನು ಬೆಳ್ಳಿಯನ್ನಾಗಿ ಮಾಡುತ್ತೇನೆ ಎಂದು ಹೇಳಬೇಕು. ನಂತರ ಮಂತ್ರವನ್ನು ಪಠಿಸಿ ಬೂದಿಯನ್ನು ಹಚ್ಚುತ್ತಿರುವಂತೆ ನಟಿಸುತ್ತ ತಾಮ್ರದ ತಗಡನ್ನು ಈ ಮೊದಲು ಸಿದ್ಧಪಡಿಸಿಕೊಂಡ ಮಿಶ್ರಣದಿಂದ ತಿಕ್ಕುತ್ತ ಹೋಗ

ಬೇಕು. ಸ್ವಲ್ಪ ಹೊತ್ತಿನಲ್ಲಿ ಇದು ಬೆಳ್ಳಿಯಂತೆ ಕಾಣತೊಡಗುವದು. ಆದರೆ ಈ ಪರಿಣಾಮವು ನಾಲ್ಕು ಗಂಟೆಗಳ ವರೆಗೆ ಮಾತ್ರ ಇರುವದೆಂಬದನ್ನು ಲಕ್ಷದಲ್ಲಿಟ್ಟುಕೊಂಡು ಕೆಲಸ ಮಾಡಬೇಕು.

## ಕಬ್ಬಿಣವನ್ನು ತಾಮ್ರವನ್ನಾಗಿ ಮಾಡುವದು

ಮೊದಲು ತುತ್ತೆ ಹಾಗೂ ಲಿಂಬಿಹುಳಿ ಇವೆರಡನ್ನೂ ಕೂಡಿಸಿಕೊಂಡು ಇಟ್ಟುಕೊಳ್ಳಬೇಕು. ನಂತರ ಪ್ರೇಕ್ಷಕರೆದುರು ಮಂತ್ರವನ್ನು ಪಠಿಸುತ್ತಿರುವಂತೆ ನಟಿಸುತ್ತ ಒಂದು ಕಬ್ಬಿಣದ ಹಾರಿಗೆ ಈ ಮಿಶ್ರಣವನ್ನು ಹಚ್ಚಿ ತಿಕ್ಕುತ್ತ ಹೋಗಬೇಕು, ಕೆಲಹೊತ್ತಿನಲ್ಲಿ ದು ತಾಮ್ರದಂತೆ ಕಾಣತೊಡಗುವದು. ಆದರೆ ಇದು ಸ್ವಲ್ಪೇ ಹೊತ್ತು ಪರಿಣಾಮದಲ್ಲಿ ಉಳಿಯುವದೆಂದು ತಿಳಿದುಕೊಂಡು ಲಕ್ಷಪೂರ್ವಕವಾಗಿ ವರ್ತಿಸಬೇಕು.

## ಕೋಳಿ ತತ್ತಿಯನ್ನು ಹಾಕಿಸುವದಕ್ಕೆ

ಒಂದು ಕೋಳಿಯನ್ನು ತೆಗೆದುಕೊಂಡು ಬರಬೇಕು, ಬಹು ಸೂಕ್ಷ್ಮವಾದ ತೂತಿನಿಂದ ಅದರೊಳಗಿನ ರಸವನ್ನೆಲ್ಲ ತೆಗೆದು ಹಾಕಬೇಕು. ಹೀಗೆ ಒಳಭಾಗವನ್ನು ಸ್ವಚ್ಛಮಾಡಿದ ನಂತರ ಸಣ್ಣದೊಂದು ಗುಂಗಿಹುಳವನ್ನು ಅದರೊಳಗೆ ಸೇರಿಸಬೇಕು, ತೂತನ್ನು ಮೇಣದಿಂದ ಒರಿಸಿ ಕಾಣದಂತೆ ಮಾಡಿ ಇಟ್ಟುಕೊಂಡಿರಬೇಕು, ಪ್ರೇಕ್ಷಕರೆದುರು ಈ ಚಮತ್ಕಾರವನ್ನು ಮಾಡಿ ತೋರಿಸುವ ಕಾಲಕ್ಕೆ ನೋಡಿರಿ ಈ ತತ್ತಿಯನ್ನು ಮೇಲಕ್ಕೆ ಹಾರುವಂತೆ ಮಾಡುತ್ತೇವೆ ಎಂದು ಹೇಳಿ ಮಂತ್ರವನ್ನು ಪಠಿಸುತ್ತ ಕೋಳಿತತ್ತಿ ಸ್ವಲ್ಪ ಅಲುಗಾಡಿಸಲು ಗುಂಗಿಹುಳಕ್ಕೆ ಚಲನೆ ದೊರೆತು ಅದು ತತ್ತಿ ಸಹಿತ ಹಾರತೊಡಗುವದು.

## ಲಿಂಬಿಹಣ್ಣನ್ನು ಅಂತರದಲ್ಲಿ ನಿಲ್ಲಿಸುವದು

ಆದಿತ್ಯವಾರ ಅಮವಾಸ್ಯೆಯು ಇರುವಂತಹ ದಿನದಂದು ಸತ್ತಬ್ರಾಹ್ಮಣನ ತಲೆಬುರುಡೆಯನ್ನು ಆದಿತ್ಯವಾರ ದಿವಸವೇ ತರಬೇಕು. ಮತ್ತು

ಬೂದಿಯನ್ನು ಇಂತಹದೇ ಸಮಯವನ್ನು ಹುಡುಕಿಕೊಂಡು ತೆಗೆದುಕೊಂಡ ಬರಬೇಕು. ಬೂದಿಯನ್ನು ಬೆಳ್ಳಿಯ ತಾಯಿತದಲ್ಲಿ ತುಂಬಿ ಇಡಬೇಕು. ತಲೆ ಬುರಡಿಯಲ್ಲಿ ಮಾತ್ರ ಎರೆಮಣ್ಣು ಗೊಬ್ಬರವನ್ನು ತುಂಬಿ ಬಿಳಿರಾಜ ಗಿರಿ ಬೀಜವನ್ನು ಹಾಕಿ ಅವು ಗಿಡವಾದ ಮೇಲೆ ಆದಿತ್ಯವಾರ ಆ ಗಿಡಗಳನ್ನು ಬೇರು ಸಹಿತ ಕಿತ್ತಹಾಕಬೇಕು ಈ ಬೇರುಗಳನ್ನು ಬೆಳ್ಳಿಯ ಉಂಗುರ ದಲ್ಲಿ ಸೇರಿಸಿ ಇಟ್ಟುಕೊಳ್ಳಬೇಕು. ತದನಂತರ ಆದಿತ್ಯವಾರ ಅಮವಾಸ್ಯೆ ಇರುವಂತಹ ದಿವಸ ಸತ್ತಂತಹ ಮಾದಿಗನ ತಲೆಬುರಡೆಯನ್ನು ಆದಿತ್ಯವಾರ ದಿವಸವೇ ತರಬೇಕು, ಅದರಲ್ಲಿ ಮಣ್ಣು ಗೊಬ್ಬರ ಹಾಗಿ ರಾಜಗಿರಿಬೀಜ ವನ್ನು ಬಿತ್ತಬೇಕು, ಅವು ಬೆಳೆದ ನಂತರ ಆದಿತ್ಯವಾರ ದಿವಸವೇ ಒಳ್ಳೇ ಶುಚಿರ್ಭೂತವಾಗಿ ಆ ಗಿಡಗಳನ್ನು ಬೇರು ಬೇರು ಸಹಿತ ಕಿತ್ತಬೇಕು. ಆ ಬೇರುಗಳನ್ನು ತಾಮ್ರವ ಉಂಗುರದಲ್ಲಿ ಹುದುಗಿರಿಸಿಕೊಳ್ಳಬೇಕು, ಈ ರೀತಿ ಯಲ್ಲಿ ಏರು ಹಾಗೂ ಇದ್ದವುಗಳನ್ನು ಮೊದಲಿಗಲೇ ಸಿದ್ಧಪಡಿಸಿಟ್ಟುಕೊಳ್ಳ ಬೇಕು, ನಂತರ ಪ್ರೇಕ್ಷಕರೆದುರು ಈ ಚಮತ್ಕಾರದ ಆಟವನ್ನು ತೋರಿಸು ವಾಗ ಒಂದು ಲಿಂಬಿಹಣ್ಣನ್ನು ತಮ್ಮ ಪೂರ್ಣ ಶಕ್ತಿಯಿಂದ ಮೇಲಕ್ಕೆ ತೂರಿ ಒಗೆಯಬೇಕು, ಬೆಳ್ಳಿಯ ಉಂಗುರ ಇಲ್ಲವೇ ಬೆಳ್ಳಿಯ ತಾಯಿತ ತೋರಿ ಸಲು ಅದು ಅಲ್ಲಿಯೇ ನಿಲ್ಲುವದು, ತಾಮ್ರದ ಉಂಗುರ ಇಲ್ಲವೇ ತಾಯಿತ ವನ್ನು ತೋರಿಸಲು ಕೆಳಗೆ ಇಳಿಯುವದು.

## ನಕಲಿ ಸಾಬಾಣ ತಯಾರಿಸುವದು

ಮೊದಲು ನೀರು ಹಾಗೂ ಎಣ್ಣೆಯನ್ನು ಸೇರಿಸಿ ಚೆನ್ನಾಗಿ ಮಿಶ್ರಣ ಮಾಡಬೇಕು. ಅದರಲ್ಲಿ ನಂತರ ಅಮೋನಿಯಾವನ್ನು ಹಾಕಬೇಕು. ಅಂದರೆ ಅದು ಕೂಡಲೇಗಟ್ಟಿಯಾಗಿ ಸಾಬಾಣದಂತಾಗುವದೆಂದು ಭಾವಿಸಿರಿ

## ಅದೃಶವಾಗುವದು

ಆದಿತ್ಯವಾರ ದಿವಸ ಅಮವಾಸ್ಯೆಯಿರುವಂತವ ದಿನವನ್ನು ಹುಡುಕಿ ಕೊಳ್ಳಬೇಕು. ಅಂದು ಒಂದು ಕರಿ ಕಾಗೆಯನ್ನು ಕೊಂಡು ತರಬೇಕು.

ಆದರ ರಕ್ತದಲ್ಲಿ ಕಹಿ ಹೀರೆಯ ಬೀಜವನ್ನು ನೆನೆಯಿಡಬೇಕು. ತದನಂತರ ಈ ಬೀಜವನ್ನು ತೆಗೆದುಕೊಂಡು ಭೂಮಿಯಲ್ಲಿ ಊರಬೇಕು. ದಿನಾಲು ಅದಕ್ಕೆ ನೀರು ಹಣಿಸುತ್ತ ಹೋಗಬೇಕು, ಕೆಲದಿನಗಳಲ್ಲಿ ಅದು ಬೆಳೆದು ಬಳ್ಳಿಯಾಗುವದು. ಆದಿತ್ಯವಾರ ಸಿದ್ಧಿಯನ್ನು ಪಡೆದುಕೊಂಡು ಆ ಬಳ್ಳಿಯನ್ನು ವಿಧಿಪೂರ್ವಕವಾಗಿ ಪೂಜಿಸಬೇಕು. ತದನಂತರ ಆ ಬಳ್ಳಿಯನ್ನು ಕೈಯಲ್ಲಿ ತೊಡಗಿಸಿಕೊಂಡು ಇಟ್ಟುಕೊಳ್ಳಲು ಅದೃಶ್ಯರಾಗುವಿರಿ. ಆದರೆ ಅದೇ ಬಳ್ಳಿಯನ್ನು ನೀವು ರಟ್ಟೆಗೆ ಏರಿಸಿಕೊಂಡಲ್ಲಿ ಮೊದಲಿನಂತೆ ಜನರಿಗೆ ಕಾಣತೊಡಗುವಿರಿ.

## ತ್ವರಿತದಲ್ಲಿಯೇ ಮಾವಿನ ಮರವನ್ನು ಮಾಡುವದು

ಸಿದ್ಧಿಯನ್ನು ಪಡೆದುಕೊಂಡ ದಿನದಂದು ಮಾವಿನ ಬೀಜಗಳನ್ನು ತರಬೇಕು. ಅವನ್ನು ಕಡಲೆಯ ಹುಳಿಯಲ್ಲಿ ನೆನೆಹಾಕಿ ಒಣಗಿಸಬೇಕು. ಎರಡನೇ ಸಾರಿ ಮತ್ತೆ ಹೀಗೆ ನೆನೆಹಾಕಬೇಕು. ಈ ಸಲ ಅದನ್ನು ನೆರಳಲ್ಲಿ ಒಣಗಿಸಬೇಕು. ಹೀಗೆ ೧೦೮ ಸಲ ಮಾಡಬೇಕು, ಒಮ್ಮೆ ಹುಳಿಯಲ್ಲಿ ನೆನೆಯಿಟ್ಟು ಒಣಗಿಸಿದರೆ ೧ ಸಲ ಭಾವನೆಯಾದಂತಾಗುವದು, ಹೀಗೆ ೧೦೮ ಸಲ ಭಾವನೆಯಾದ ನಂತರ ಈ ಚಮತ್ಕಾರವನ್ನು ಮಾಡಿ ತೋರಿಸುವ ಕಾಲಕ್ಕೆ ಈ ಬೀಜವನ್ನು ಬಿತ್ತಿ ಮೇಲಿಂದ ಮೇಲೆ ನೀರು ಹಾಕುತ್ತ ಹೋಗಬೇಕು, ೧೫-೨೦ ನಿಮಿಷಗಳಲ್ಲಿ ಅದು ಗಿಡವಾಗಿ ತೋರುವದೆಂದು ತಿಳಿಯಬೇಕು.

## ಲಿಂಬಿಯ ಹಣ್ಣಿನ ಕುಣಿತ

ಒಂದು ಅತ್ಯುತ್ತಮ ಮತ್ತು ದೊಡ್ಡದಾದ ಒಣಗಿದ ಲಿಂಬಿಹಣ್ಣನ್ನು ತರಬೇಕು, ಅದಕ್ಕೆ ಸಣ್ಣ ತೂತು ತೆಗೆಯಬೇಕು, ಅದರಲ್ಲಿ ಒಂದು ತೊಲಿ ಪಾರಜವನ್ನು ತುಂಬಬೇಕು, ತೂತನ್ನು ಬಾಯಿಗೆಮೇಣ ಇಲ್ಲವೇ ಮಯೂರ ಶಿಖಿ ಹಚ್ಚಿ ಬಂದು ಮಾಡಿಡಬೇಕು. ಈ ಚಮತ್ಕಾರವನ್ನು ಮಾಡಿತೋರಿಸುವ ಸಮಯದಲ್ಲಿ ಅದನ್ನು ಒಂದು ಕಾದ ಕಲ್ಲಿನ ಮೇಲೆ ಇಲ್ಲವೇ ಕಬ್ಬಿ

ಣದ ಹಂಚಿನ ಮೇಲೆ ಇರಿಸಿ ಮಂತ್ರ ಪಠಿಸುವಂತೆ ನಟಿಸಬೇಕು. ಒಂದೆ ರಡು ನಿಮಿಷಗಳಲ್ಲಿ ಅದು ತಂತಾನೇ ಕುಣಿಯತೊಡಗುವದಲ್ಲದೇ ಅತ್ತಿತ್ತ ಓಡಾಡತೊಡಗಿ ಪ್ರೇಕ್ಷಕರನ್ನು ಆಶ್ಚರ್ಯದಲ್ಲಿ ಕೆಡವುವುದು ಖಂಡಿತವೆಂದು ತಿಳಿಯಬೇಕು.

## ಬಾಯಿಯಿಂದ ಬೆಂಕಿ ಹಿಡಿಯುವದು

ಆದಿತ್ಯವಾರ ಶುಭಮುಹೂರ್ತವನ್ನು ಹುಡುಕಿಕೊಂಡು ಬಿಳಿಯ ಕಣಗಲ ತಪ್ಪಲವನ್ನು ತರಬೇಕು, ಅದನ್ನು ಬಾಯಿಯಿಂದ ಚೆನ್ನಾಗಿ ಜಬಡಿ ಅದರ ರಸವನ್ನು ಬಾಯಲ್ಲಿ ಹಿಡಿದುಕೊಳ್ಳಬೇಕು. ಆಗ ಬಾಯಿಯಿಂದ ಹಿಡಿವರೆ ಕಾಯ್ದ ಕಬ್ಬಿಣದ ವಸ್ತುವನ್ನು ಹಿಡಿದರೆ ಬಾಯಿ ಸುಡುವದಿಲ್ಲ.

## ನೀರನ್ನು ರಕ್ತವಾಗಿ ಮಾಡುವದು

ಹುತ್ತದ ಮೇಲಿನ ಕಕ್ಕೆಯಕಾಯಿಯನ್ನು ಆದಿತ್ಯವಾರ ದಿವಸ ತೆಗೆದುಕೊಂಡು ಬರಬೇಕು ಅದನ್ನು ನೀರಿನಲ್ಲಿ ತೇಯಬೇಕು, ನಂತರ ಅದನ್ನು ಹಾಗೂ ಗಂಧವನ್ನು ಸೇರಿಸಿ ನೀರಿನಲ್ಲಿ ಹಾಕಲಾಗಿ ಆ ನೀರೆಲ್ಲ ರಕ್ತದಂತಾದುದು ಕಂಡು ಬರುವದು, ಇದಲ್ಲದೇ ಅದೇ ಕಕ್ಕಿಯ ಕಾಯಿಯನ್ನು ಬಾಯೊಳಗೆ ಅಗಿದು ನಂತರ ಸ್ವಲ್ಪ ಗಂಧಕವನ್ನು ಅಗಿದು ನೀರಿನ ಗ್ಲಾಸಿನಲ್ಲಿ ಮುಕ್ಕಳಿಸಲು ಆ ನೀರೆಲ್ಲ ರಕ್ತವಾಗಿ ತೋರುವದು.

## ಮನುಷ್ಯನು ಕುದುರೆಯ ಹಾಗೆ ಕಾಣಿಸುವಂತೆ ಮಾಡುವದು

ಆದಿತ್ಯವಾರ ದಿವಸ ಸತ್ತ ಕುದುರೆಯ ತಲೆಬುರುಡೆಯನ್ನು ತರಬೇಕು ಅದರಲ್ಲಿ ಕರಿಯ ಮಣ್ಣನ್ನು ಹಾಕಬೇಕು, ಮೇಲೆ ಸ್ವಲ್ಪ ಗೊಬ್ಬರವನ್ನು ಹಾಕಿ ಸಣಬಿನ ಬೀಜವನ್ನು ಅದರಲ್ಲಿ ಊರಬೇಕು, ಅದು ಗಿಡವಾದಾಗ ದನಕರುಗಳಿಂದ ಧಕ್ಕೆಯಾಗದಂತಹ ಸ್ಥಳದಲ್ಲಿಟ್ಟು ದಿನಾಲು ನೀರು ಹಣಿಸುತ್ತ ಹೋಗಬೇಕು, ಈ ನೀರು ಸಿಹಿಯಾದುದಿರಬೇಕು, ಈ ರೀತಿ ಕೆಲ ದಿನ ನೀರು ಹಾಕಿದ ನಂತರ ಆ ಸಣಬಿನಬೀಜ: ಮೊಳಕೆಯೊಡೆದುಗಿಡವಾಗು

ವದು, ಅದು ದೊಡ್ಡದಾದ ಬಳಿಕ ಆ ಗಿಡವನ್ನು ಷೋಡಶೋಪಚಾರ ಗಳಿಂದ ವಿಧಿಪೂರ್ವಕವಾಗಿ ಪೂಜಿಸಬೇಕು, ಆದಿತ್ಯವಾರ ಮುಂಜಾನೆ ಪೂರ್ವಕ್ಕೆ ಮುಖ ಮಾಡಿಕೊಂಡು ನಿಂತು ಆ ಗಿಡವನ್ನು ಕಿತ್ತಬೇಕು, ಅದನ್ನು ಕೊಳೆ ಹಾಕಿ ಆ ಸಣಬಿನಿಂದ ಒಂದು ಹಗ್ಗವನ್ನು ತಯಾರಿಸ ಬೇಕು, ಆ ಹಗ್ಗವನ್ನು ತಮ್ಮ ಬಳಿ ಜೋಪಾನವಾಗಿರಿಸಿಕೊಳ್ಳಬೇಕು, ಈ ಚಮತ್ಕಾರವನ್ನು ಪ್ರೇಕ್ಷಕರೆದುರು ಮಾಡಿ ತೋರಿಸುವಾಗ ಮಂತ್ರವನ್ನು ಪಠಿಸುತ್ತಿರುವವರಂತೆ ನಟಿಸುತ್ತ ಈ ಹಗ್ಗವನ್ನು ಯಾರಾದರೂ ಕೊರಳಿಗೆ ಹಾಕಬೇಕು, ಆಗ ಅವನು ಪ್ರೇಕ್ಷಕರ ಕಣ್ಣಿಗೆ ಕುದುರೆಯಂತೆ ಕಂಡು ಬರು ವನು, ಈ ಹಗ್ಗವನ್ನು ತೆಗೆಯಲಾಗಿ ಅವನು ಮೊದಲಿನ ಹಾಗೆ ಮನುಷ್ಯ ನಾಗಿ ಕಂಡು ಬರತೊಡಗುವನು.

## ನೀರಿನ ಮೇಲೆ ನಡೆಯುವದು

ಆದಿತ್ಯವಾರ ಪುಷ್ಯನಕ್ಷತ್ರವಿರುವಂತಹ ದಿನವನ್ನು ಹುಡುಕಿಕೊಳ್ಳ ಬೇಕು, ಅಂದು ವಿಧ್ಯುಕ್ತ ರೀತಿಯಲ್ಲಿ ಕರಿಮತ್ತಿ ಕಟ್ಟಿಗೆಯನ್ನು ತರಬೇಕು, ಅದರಿಂದ ಕಾಲಲ್ಲಿ ಹಾಕಿಕೊಳ್ಳುವ ಆವಿಗೆಗಳನ್ನು ತಯಾರಿಸಿಕೊಳ್ಳಬೇಕು, ಅವನ್ನು ಕಾಲೊಳಗೆ ಹಾಕಿಕೊಂಡು ನೀರಿನ ಮೇಲೆ ನಡೆಯುವದರಿಂದ ಆವಿಗೆ ಹಾಕಿಕೊಂಡವರು ಮುಳುಗುವದಿಲ್ಲ ನೀರಲ್ಲಿ ಸರಳವಾಗಿ ನಡೆದು ಹೋಗುವರು, ಆದರೆ ಮೊದಲು ಆ ವೃಕ್ಷಕ್ಕೆ ನಿನ್ನ ಕಟ್ಟಿಗೆಯಿಂದ ಜಲ ಸ್ತಂಭನ ಸಾಧಿಸುವಂತೆ ಮಾಡಬೇಕೆಂದು ಪ್ರಾರ್ಥಿಸಿಕೊಳ್ಳಬೇಕು.

## ಕೈಯಲ್ಲಿ ಬೆಂಕಿ ಹಿಡಿದರೂ ಸುಡದಿರುವಿಕೆ

ನವಸಾಗರ ಹಾಗೂ ಕರ್ಪೂರಗಳನ್ನು ಶುದ್ಧ ನೀರಿನಲ್ಲಿ ಅರೆದು ಎರಡೂ ಕೈಗಳಿಗೆ ಚೆನ್ನಾಗಿ ಲೇಪಿಸಿಕೊಂಡು ಒಣಗಿಸಿಕೊಳ್ಳಬೇಕು, ಮುಂದೆ ಈ ಕೈಗಳಿಂದ ಉರಿಯುವ ಬೆಂಕಿಯನ್ನು ನೀವು ಹಿಡಿದುಕೊಂಡರೂ ಕೈ ಸುಡುವದಿಲ್ಲವೆಂದು ತಿಳಿದುಕೊಳ್ಳಬೇಕು.

ಇದಲ್ಲದೆ ಅಪ್ಪು, ಘಟಕ, ಉಪ್ಪುಕತಿಗರನ ತೊಪ್ಪಲು, ಕೋಳಿ ತತ್ತಿಯ ಒಳಗಿನ ಬಿಳಿದ್ರವ ಇವನ್ನು ಸಮಭಾಗದಲ್ಲಿ ತೆಗೆದುಕೊಂಡು ಚೆನ್ನಾಗಿ ಮಿಶ್ರಣವನ್ನು ಮಾಡಬೇಕು, ಅದನ್ನು ಕೈಗೆ ಹಚ್ಚಿಕೊಂಡು ಆರಿಸಿ ಕೊಳ್ಳಬೇಕು, ಮುಂದೆ ಆ ಕೈಗಳಿಂದ ನೀವು ಬೇಕಿಯನ್ನು ಹಿಡಿದರೆ ಯಾವ ರೀತಿಯಲ್ಲಿಯೂ ಕೈ ಸುಡುವದಿಲ್ಲವೆಂದು ತಿಳಿದುಕೊಳ್ಳಬೇಕು.

## ಬೆಂಕಿಯಿಲ್ಲದೇ ಜೋಳದ ಅಳ್ಳು ಸಿದ್ಧಪಡಿಸುವದು

ಮೊದಲು ಸ್ವಲ್ಪ ಜೋಳವನ್ನು ತೆಗೆದುಕೊಂಡು ಅವನ್ನು ಕಳ್ಳಿಹಾಲಿ ನಲ್ಲಿ ನೆನೆಹಾಕಬೇಕು, ನಂತರ ಅವನ್ನು ಹೊರಗೆ ತೆಗೆದು ನೆರಳಲ್ಲಿ ಒಣ ಗಿಸಬೇಕು, ಹೀಗೆ ಏಳು ಸಲ ನೆನೆ ಹಾಕಿ ಒಣಗಿಸಿ ಜೋಪಾನವಾಗಿ ತೆಗೆ ದಿರಿಸಿಕೊಳ್ಳಬೇಕು, ಈ ಚಮತ್ಕಾರವನ್ನು ತೋರಿಸಬೇಕಾದ ಕಾರ್ಯದಲ್ಲಿ ಸ್ವಲ್ಪ ಜೋಳದ ಕಾಳುಗಳನ್ನು ಕಡೆಗೆ ತೆಗೆದು ಬಿಸಲಲ್ಲಿ ಇಟ್ಟು ಒಂದು ಸ್ವಚ್ಛ ಅರಿವೆಯಲ್ಲಿ ಹಾಕಿಕೊಳ್ಳಬೇಕು, ಮಂತ್ರವನ್ನು ಪಠಿಸುತ್ತಿರುವಂತೆ ನಟಿಸುತ್ತ ಕಟ್ಟಿಗೆಯಿಂದ ಇಲ್ಲವೇ ಕೈಯಿಂದ ಜೋಳವನ್ನು ಆಡಿಸುತ್ತ ಹೋಗಬೇಕು, ಅಗ ಹಂಚಿನ ಮೇಲೆ ತಯಾರಿಸುವಾಗ ಅಳ್ಳು ಹೇಗೆ ಹಾಕುವದೋ ಅದೇ ರೀತಿ ಈ ಜೋಳದ ಕಾಳುಗಳೂ ಹಾರಿ ಹಾರಿ ಅಳ್ಳು ಗಳಾಗುವವು, ಅದರಿಂದ ಜನರು ಬೆರಗಾಗುವದು ಖಾತ್ರಿ ಎಂದು ತಿಳಿದು ಕೊಳ್ಳಬೇಕು.

## ದೀಪಗಳ ಬಡಿದಾಟ

ಎರಡು ಪಣತಿಗಳನ್ನು ತೆಗೆದುಕೊಳ್ಳಬೇಕು, ಒಂದರಲ್ಲಿ ಹುಲಿಯ ಚರಬಿ, ಇನ್ನೊಂದರಲ್ಲಿ ಆಡಿನ ಚರಬೆಯನ್ನು ಸಬಕಾರದ ಬತ್ತಿಯಿಂದ ಪಣತಿಯಲ್ಲಿ ದೀಪ ಹಚ್ಚಿಡಬೇಕು, ಈ ಎರಡೂ ಪಣತಿಗಳನ್ನು ಒಂದಡಿ ಅಂತರದಲ್ಲಿ ಎದುರು ಬದುರಾಗಿ ಇಡಲಾಗಿ ಅವು ಮನುಷ್ಯರು ಕಚ್ಚಾಡಿದ ಹಾಗೆ ಬಡಿದಾಡುವದನ್ನು ಕಾಣುತ್ತೇವೆ.

## ಹಕ್ಕಿಯ ರೆಕ್ಕೆಗಳ ಮೇಲೆ ಗಿಡಬಳ್ಳಿ ಮೂಡಿಸುವದು

ನವಸಾಗರ ಬಳಿಗಾರ ಇವನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಸಿರಸಲ ರಸದಲ್ಲಿ ಕೂಡಿಸಿ ಚೆನ್ನಾಗಿ ಮಿಶ್ರಣವನ್ನು ಸಿದ್ಧಪಡಿಸಬೇಕು, ಬಿಳಿ ಹಕ್ಕಿ ಇಟ್ಟ ತತ್ತಿಯ ಮೇಲೆ ಮನಸ್ಸಿಗೆ ಬಂದ ಚಿತ್ರವನ್ನು ಈ ರಸದಿಂದ ಬರೆಯ.ಬೇಕು, ಆ ತತ್ತಿ ಒಡೆದು ಮರಿಯಾಗುವ ಸಮಯದಲ್ಲಿ ಆ ಹಕ್ಕಿ ಮರಿಯ ರೆಕ್ಕೆಯ ಮೇಲೆ ಅದೇ ಚಿತ್ರವು ಮೂಡಿರುತ್ತದೆಂದು ತಿಳಿಯಬೇಕು ಇದಲ್ಲದೇ ಅಕ್ಷರಗಳೇ ಮಾಡುವವೆಂದು ತಿಳಿದುಕೊಳ್ಳಬೇಕು.

## ನೀರಿನಲ್ಲಿ ಕಲ್ಲುತೇಲುವದು

ಆದಿತ್ಯವಾರ ಸಿದ್ಧಿಯ ದಿನದಲ್ಲಿ ಮೊಲ ಹಾಗೂ ಹಂದಿಗಳ ಮಲ ವನ್ನು ನೆಲಗುಳ್ಳ ಬೇರನ್ನೂ ತರಬೇಕು, ಈ ಮೂರನ್ನು ಚೆನ್ನಾಗಿ ಅರೆಯ ಬೇಕು, ನಂತರ ಈ ಲೇಪವನ್ನು ಒಂದು ಕಲ್ಲಿಗೆ ಹಚ್ಚಬೇಕು, ಅದನ್ನು ಚೆನ್ನಾಗಿ ಒಣಗಿಸಬೇಕು, ನಂತರ ನೀರಲ್ಲಿ ತೇಲಬಿಡಬೇಕು, ಆಗ ಆ ಕಲ್ಲು ನೀರಲ್ಲಿ ತೇಲುವದನ್ನು ಕಂಡು ಜನರು ಸೋಜಿಗಪಡುವರು.

## ದೀಪವಿಲ್ಲದೇ ಬೆಳಕು ಕಾಣುವದು

ಶುದ್ಧವಾದ ಮನಶೀಳದಲ್ಲಿ ಹರತಾಳವನ್ನು ಕೂಡಿಸಬೇಕು, ನಂತರ ಈ ಮಿಶ್ರಣವನ್ನು ಒಂದು ಬಾಟ್ಲಿಯಲ್ಲಿ ಹಾಕಿ ಇಡಬೇಕು, ಈ ಬಾಟ್ಲಿ ಯನ್ನು ತೆಗೆದುಕೊಂಡು ಹೋಗಿ ಇಡಬೇಕು, ಅದರ ಸುತ್ತಲೂ ಪ್ರಕಾಶ ಬೀಳುವದರಿಂದ ಸಾಕಷ್ಟು ಬೆಳಕಾಗಿ ಕಾಣುವದು.

## ವಿವಿಧ ಕೀಟಕಗಳು ಕಾಣುವಂತೆ ಮಾಡುವದು

ಮುಂಜಾನೆ ಎದ್ದು ಯಾರೊಂದಿಗೂ ಮಾತನಾಡದೇ ಮೌನವಾಗಿ ಹೋಗಿ ಅಂಕಲಿ ಹೂ. ವಡೆಯನ ಕುಂಟೆ ಹೂ ಇವನ್ನು ತಂದು ಅರೆದು ಅಂಗೈಗೆ ತುಂಬಿದ ಕೊಡದೊಳಗಿನ ನೀರು ತೆಗೆದುಕೊಂಡು ಈ ಮಿಶ್ರಣ

ಹಚ್ಚಿಕೊಳ್ಳಬೇಕು, ಈ ಅಂಗೈಯನ್ನು ಕುರಿ ಎಣ್ಣೆಯಿಂದ ಮುಚ್ಚಿದರೆ ಇಲಿಯಾಗಿರುವದು ಕಾಣುತ್ತದೆ, ಹುಣಸಿಎಲಿ ಮುಚ್ಚಿದರೆ ಝುರಿ ಆಗಿರುವದು ಕಾಣುತ್ತದೆ, ಬೇವಿನ ಎಲಿ ಮುಚ್ಚಿದರೆ ಜೇಳನಂತೆ ಕಾಣುತ್ತದೆ, ವಿಳೆದೆಲಿ ಮುಚ್ಚಿದರೆ ಗಿಳಿಯಾಗುತ್ತದೆ, ಸೌತೆಕಾಯಿಗೆ ಒರೆಸಲು ಮುಂಗಲಿಯಾಗಿ ಕಾಣುವವು, ಈ ಸಾಧನೆಯನ್ನು ಒಂದೂವರಿ ಗಂಟೆಯೊಳಗಾಗಿ ಮುಗಿಸಿಕೊಳ್ಳಬೇಕು, ತದನಂತರ ಈ ಸಿದ್ಧಿ ಉಳಿಯುವದಿಲ್ಲ.

## ಹಗಲಿನಲ್ಲಿ ನಕ್ಷತ್ರಗಳನ್ನು ನೋಡುವದು

ಬಿಳೀ ಸುರಮವನ್ನು ಬಹಳ ಜಿನುಗಾಗುವಂತೆ ಅರೆಯಬೇಕು, ಅದರಲ್ಲಿ ಅಗಸ್ತ್ಯ ಪುಷ್ಪವನ್ನು ಹಾಕಿ ಏಳು ದಿನಗಳ ವರೆಗೆ ತಪ್ಪದೇ ಅರೆಯುತ್ತ ಹೋಗಬೇಕು, ಹೀಗಾದ ನಂತರ ಅಂಜನವು ಸಿದ್ಧವಾಗುವದು, ಇದನ್ನು ಎರಡೂಕಣ್ಣುಗಳಿಗೆ ಹಚ್ಚಿಕೊಂಡು ಹಗಲಿನಲ್ಲಿಯೇ ನಕ್ಷತ್ರಗಳನ್ನು ನೋಡಬಯಸಿದಲ್ಲಿ ಕಾಣುವವೆಂದು ತಿಳಿಯಬೇಕು.

## ಮನುಷ್ಯನನ್ನು ಟಿಗರನ್ನಾಗಿ ಮಾಡುವದು

ವದ್ಯ ಚತುರ್ದಶಿಯ ದಿವಸ ಇಲ್ಲವೇ ಚೌತಿಯ ದಿವಸ ಟಿಗರಿನ ತಲೆಬುರಡೆಯನ್ನು ತೆಗೆದುಕೊಂಡು ಬರಬೇಕು, ಅದರಲ್ಲಿ ಕರಿಮಣ್ಣನ್ನು ತುಂಬಬೇಕು, ಮತ್ತು ಧತ್ತೂರಿಯ ಬೀಜವನ್ನು ಬಿತ್ತಬೇಕು, ನಿಯಮಿತವಾಗಿ ನೀರು ಹಾಕುತ್ತ ಹೋಗಬೇಕು, ಕೆಲ ದಿನಗಳಲ್ಲಿ ಅದರ ಗಿಡಗಳಾಗುವವು, ಅವುಗಳ ಕಾಯಿಗಳನ್ನು ತೆಗೆದುಕೊಂಡು ಬೀಜಗಳನ್ನು ಸಂಗ್ರಹಿಸಬೇಕು, ಈ ಬೀಜಗಳಲ್ಲಿ ಒಂದು ಕಾಳನ್ನು ಯಾರು ಬಾಯಲ್ಲಿ ಇಟ್ಟುಕೊಳ್ಳುವರೋ ಅವರು ಟಿಗರಿನಂತಾಗುವದು ಖಾತ್ರಿ ಎಂದು ತಿಳಿಯಬೇಕು.

## ಮನುಷ್ಯನನ್ನು ಗೂಬೆಯನ್ನಾಗಿ ಮಾಡುವದು

ಮೊದಲು ಒಂದು ಗೂಗೆಯನ್ನು ಹಿಡಿದುಕೊಂಡು ಬರಬೇಕು, ಅದರ ಬಾಯಿಯಲ್ಲಿ ಕೇಶರವನ್ನು ಹಾಕಬೇಕು, ನಂತರ ರವಿವಾರ ಪುಷ್ಯನಕ್ಷತ್ರವು

ಇರುವಂತಹ ಯೋಗವನ್ನು ಸಾಧಿಸಿಕೊಂಡು ಅದಕ್ಕೆ ಹಾಲನ್ನು ಕುಡಿಸ ಬೇಕು, ಈ ಪ್ರಯೋಗವನ್ನು ಯಾವ ಶತ್ರುವಿನ ಹೆಸರಿನಲ್ಲಿ ಮಾಡುವಿರೋ ಅವನು ಗೂಗೆಯಂತೆ ಒದರ ತೊಡಗುವನಲ್ಲದೇ ಮುಂದೆ ಮೃತ್ಯುವಶನಾ ಗುವನೆಂದು ತಿಳಿದುಕೊಳ್ಳಬೇಕು.

## ಮನುಷ್ಯನಿಗೆ ನರಿಯಂತೆ ಕಾಣಿಸುವದು

ಪ್ರಾರಂಭದಲ್ಲಿ ಒಂದು ನರಿಯ ತಲೆಬುರಡೆಯನ್ನು ತೆಗೆದುಕೊಂಡು ಬರಬೇಕು, ಅದರಲ್ಲಿ ಮಣ್ಣನ್ನು ಮತ್ತು ಸ್ವಲ್ಪ ಗೊಬ್ಬರವನ್ನು ಹಾಕಿ ಬೆಳೆಗೆ ಅನುಕೂಲಗೊಳಿಸಿಕೊಳ್ಳಬೇಕು, ನಂತರ ಡಾಳಿಂಬರಿಯ ಬೀಜವನ್ನು ಅದ ರಲ್ಲಿ ಬಿತ್ತಬೇಕು, ಅದಕ್ಕೆ ಪ್ರತಿನಿತ್ಯವೂ ನೀರನ್ನು ಹಾಕುತ್ತ ಹೋಗಬೇಕು. ಅವು ಗಿಡವಾಗಿ ಬೆಳೆದ ನಂತರ ಅದರ ಹೂಗಳನ್ನು ತೆಗೆದುಕೊಳ್ಳಬೇಕು, ಈ ಹೂಗಳಿಂದ ಒಂದು ಮಾಲೆಯನ್ನು ಯಾರು ತಮ್ಮ ಕೊರಳಲ್ಲಿ ಕಟ್ಟಿ ಕೊಳ್ಳುವರೋ ಅವರಿಗೆ ಸರ್ವ ಲೋಕವು ನರಿಯ ರೂಪದಲ್ಲಿ ಕಾಣತೊಡ ಗುವದೆಂದು ತಿಳಿಯಬೇಕು.

## ನವಿಲಿನಂತೆ ಕಾಣಿಸುವದು

ಈ ಪ್ರಯೋಗವನ್ನು ಆರಿದ್ರಾ ನಕ್ಷತ್ರದ ಕಾಲಕ್ಕೆ ಮಾಡಬೇಕೆಂಬ ದನ್ನು ಲಕ್ಷದಲ್ಲಿರಿಸಿಬೇಕು, ಒಂದು ನವಿಲಿನ ತಲೆಬುರಡೆಯನ್ನು ಹುಡುಕಿ ಕೊಂಡು ತರಬೇಕು, ಅದರಲ್ಲಿ ಕಪ್ಪುಮಣ್ಣನ್ನು ಹಾಕಿ ತುಂಬಬೇಕು, ಸ್ವಲ್ಪ ಗೊಬ್ಬರವನ್ನು ಹಾಕಿ ಏನಾದರೂ ಅದರಲ್ಲಿ ಬೆಳೆಯುವದಕ್ಕೆ ಭೂಮಿಯನ್ನು ಹದಗೊಳಿಸಿಕೊಳ್ಳಬೇಕು, ತದನಂತರ ಬಿಳಿಗುಲಗಂಜಿಯ ಬೀಜವನ್ನು ಅದ ರಲ್ಲಿ ಬಿತ್ತಬೇಕು, ಅದಕ್ಕೆ ನಿಯಮಿತವಾಗಿ ನೀರುಣಿಸುತ್ತ ಹೋಗಬೇಕು, ಗುಲಗಂಜಿಯ ಗಿಡವೇರುವದು ಅದು ಬೆಳೆದು ಸ್ವಲ್ಪ ದೊಡ್ಡದಾದ ಮೇಲೆ ಅದಕ್ಕೆ ಹೂಗಳಾಗುವವು, ಅವುಗಳನ್ನು ತೆಗೆದುಕೊಂಡು ಒಂದು ಮಾಲೆ ಯನ್ನು ಸಿದ್ಧಪಡಿಸಬೇಕು, ಈ ಮಾಲೆಯನ್ನು ಯಾರು ಕೊರಳಲ್ಲಿ ಹಾಕಿ

ಕೊಳ್ಳುವರೋ ಅವರಿಗೆ ಸರ್ವ ಲೋಕವೂ ನವಿಲಿನ ರೂಪದಲ್ಲಿಯೇ ಕಾಣಿಸುವದೆಂದು ತಿಳಿದುಕೊಳ್ಳಬೇಕು.

## ಮನುಷ್ಯನ ಕಿವಿ ಕತ್ತೆಯ ಕಿವಿಯಂತೆ ಕಾಣುವದು

ಕತ್ತೆಯ ಕಿವಿಯಲ್ಲಿಯ ಹೊಲಸನ್ನು ತಂದು ಕರಿ ಎಳ್ಳಿನ ಎಣ್ಣೆಯಲ್ಲಿ ಸೇರಿಸಿ ಅದರಿಂದ ದೀಪವನ್ನು ಹಚ್ಚಬೇಕು, ಈ ದೀಪದ ಬೆಳಕಿನಲ್ಲಿ ಕಳಿತ ಮನುಷ್ಯನನ್ನು ನೋಡಲಾಗಿ ಅವನ ಕಿವಿಗಳು ಕತ್ತೆಯ ಕಿವಿಗಳಂತೆ ತುಂಬ ಉದ್ದವಾಗಿ ಕಾಣಿಸುವವೆಂದು ತಿಳಿದುಕೊಳ್ಳಬೇಕು.

## ಪುರುಷನು ಸ್ತ್ರೀಯಂತೆ ಕಾಣಿಸುವದು

ರವಿವಾರ ದಿವಸ ವಿಶಾಖಾನಕ್ಷತ್ರವಿರುವಂತಹ ಯೋಗವನ್ನು ಸಾಧಿಸಿಕೊಂಡು ಮನುಷ್ಯನ ತಲೆಬುರಡೆಯನ್ನು ತರಬೇಕು, ಈ ತಲೆಬುರಡೆಯಲ್ಲಿ ಸ್ವಲ್ಪ ಮಣ್ಣು ಹಾಗೂ ಗೊಬ್ಬರ ಹಾಕಿ ಏನಾದರೂ ಬೆಳೆ ಬರುವಂತೆ ಅನುಕೂಲಗೊಳಿಸಿಕೊಳ್ಳಬೇಕು. ಅದರಲ್ಲಿ ಗುಲಗಂಜಿಯ ಬೀಜವೊಂದನ್ನು ಬಿತ್ತಬೇಕು, ಅದಕ್ಕೆ ನಿಯಮಿತ ರೀತಿಯಲ್ಲಿ ನೀರನ್ನು ಹಾಕುತ್ತ ಹೋಗಬೇಕು, ಆ ಗಿಡವು ಬೆಳೆದು ದೊಡ್ಡದಾದ ನಂತರ ಫಲ ಬಿಟ್ಟ ನಂತರ ಗುಲಗಂಜಿಯ ಬೀಜಗಳನ್ನು ತೆಗೆದುಕೊಂಡು ಗಿಡದ ನೆರಳಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು ಮುಂದೆ ಗುರುವಾರ ದಿವಸ ರೋಹಿಣಿ ನಕ್ಷತ್ರವಿರುವಂತಹ ಯೋಗವೊಂದನ್ನು ಹುಡುಕಿಕೊಂಡು ಯಾವ ಮನುಷ್ಯನು ಈ ಗುಲಗಂಜಿಯ ಬೀಜವನ್ನು ಬಾಯಲ್ಲಿ ಹಿಡಿದುಕೊಳ್ಳುವನೋ ಅವನು ನೋಡಲು ಸ್ತ್ರೀಯಂತೆ ಕಾಣಿಸುವನೆಂದು ತಿಳಿದುಕೊಳ್ಳಬೇಕು.

## ಕೋಣದಂತೆ ಕಾಣಿಸುವದು

ಯುದ್ಧಕ್ಷೇತ್ರದಲ್ಲಿ ಕೊಲ್ಲಲ್ಪಟ್ಟಂತಹ ಕೋಣದ ತಲೆಯನ್ನು ತರಬೇಕು. ರವಿವಾರದಿವಸ ಆರಿದ್ರಾ ನಕ್ಷತ್ರವಿರುವಂತಹ ಯೋಗವನ್ನು ಸಾಧಿಸಿಕೊಂಡು ಆ ತಲೆಯೊಳಗಿನ ಎಲುವು ಮಾಂಸ ತೆಗೆದು ಅದನ್ನು ಪೊಳ್ಳು

ಗೊಳಿಸಬೇಕು, ಅದರಲ್ಲಿ ಕರಿಮಣ್ಣು ಹಾಗೂ ಸ್ವಲ್ಪ ಗೊಬ್ಬರವನ್ನು ಹಾಕಬೇಕು, ಅದರಲ್ಲೊಂದು ಅಪ್ಪುವಿನ ಬೀಜವನ್ನು ಬಿತ್ತಬೇಕು, ಅದಕ್ಕೆ ನಿಯಮಿತವಾಗಿ ನೀರು ಹಾಕುತ್ತ ಹೋಗಬೇಕು, ಅಪ್ಪುವಿನ ಗಿಡವು ಬೆಳೆದನಂತರ ಅದಕ್ಕೆ ಫಲಗಳು ಬಿಡುವವು. ಈ ಫಲಗಳು ಪಕ್ವವಾದ ನಂತರ ಆ ಗಿಡದ ಎಲೆಗಳನ್ನು ಕತ್ತರಿಸಿ ತೆಗೆದುಕೊಳ್ಳಬೇಕು. ಅದರ ಎರಡು ಎಲೆಗಳು ಹಾಗೂ ಎರಡು ಕರಿ ಮೆಣಸನ್ನು ತೆಗೆದುಕೊಂಡು ಅರೆಯಬೇಕು, ಈ ಚೂರ್ಣವನ್ನು ಯಾವ ಮನುಷ್ಯನಿಗೆ ತಿನ್ನಲಿಕ್ಕೆ ಕೊಡುವಿರೋ ಅವನಿಗೆ ನೋಡಿದತ್ತೆಲ್ಲ ಸುತ್ತುಮುತ್ತಲೂ ಕೋಣಗಳೇ ಕೋಣಗಳು ಕಾಣಿಸುವದು ಅತಿ ನಿಶ್ಚಿತವೆಂದು ತಿಳಿದುಕೊಳ್ಳಬೇಕು.

## ಉಂಗುರವನ್ನು ಕುಣಿಸುವದು

ಒಂದು ಪೊಳ್ಳಾಗಿರುವ ಉಂಗುರವನ್ನು ತೆಗೆದುಕೊಳ್ಳಬೇಕು. ಅದು ಬಹಳ ಹಗುರಾಗಿಡಬೇಕು. ಅದರಲ್ಲಿ ನವಸಾಗರವನ್ನು ತುಂಬಬೇಕು. ಇದರ ಪ್ರಯೋಗವನ್ನು ಯಾವಾಗಲೂ ರಾತ್ರಿಕಾಲದಲ್ಲಿಯೇ ಮಾಡಬೇಕು ಈ ಉಂಗುರವನ್ನು ಬಿಸಿ ಮಾಡಲಾಗಿ ಅದು ಕುಣಿಯತೊಡಗುವದೆಂಬದರಲ್ಲಿ ಸಂದೇಹವಿಲ್ಲ.

## ಹರೆಯುದವನು ಮುದುಕನಂತೆ ಕಾಣುವನು

ಪುನರ್ವಸು ಮಳೆಯು ಬೀಳುತ್ತಿರುವ ಸಮಯದಲ್ಲಿ ಆದಿತ್ಯವಾರ ಅಮವಾಸ್ಯೆ ಇರುವಂತಹ ಯೋಗವೊಂದನ್ನು ಹುಡುಕಿಕೊಂಡು ಹತ್ತಿಯ ಬೀಜವನ್ನು ಬಿತ್ತಿ ಬೆಳಿಸಬೇಕು. ಅದಕ್ಕೆ ನಿಯಮಿತವಾಗಿ ನೀರುಣ್ಣಿಸಬೇಕು. ಅದು ಬೆಳೆದು ದೊಡ್ಡದಾದ ನಂತರ ಹೂವು ಬಿಡುವದು. ಆ ಹೂವುಗಳನ್ನು ತೆಗೆದುಕೊಂಡು ಬರಬೇಕು ಅವನ್ನು ಕುರಿಯ ಮೂತ್ರದಲ್ಲಿ ಅರೆದು ಅಂಕೋಲಿಯ ಎಣ್ಣೆಯಲ್ಲಿ ಸೇರಿಸಿ ಲೇಪವನ್ನು ಸಿದ್ಧಪಡಿಸಬೇಕು. ಈ ಲೇಪವನ್ನು ಮಾಡಿಕೊಂಡವನು ಎಷ್ಟೇ ಹರೆಯದವರಿದ್ದರೂ ಸಹ ವಯೋವೃದ್ಧರಂತೆ ಕಂಡು ಬರುವರೆಂದು ತಿಳಿದುಕೊಳ್ಳಬೇಕು.

## ಕೈಯಿಂದ ನೀರಿನಲ್ಲಿ ರೂಪಾಯಿ ಇರಿಸಿ ತೆಗೆದರೂ ಕೈ ಒಣಗೇ ಇರುವದು

ಸಾಲಿಕೋ ಪುಡಿಯಂ ರಾಸ್ ಫೋಸ್ ಎಂಬ ಔಷಧಿಯನ್ನು ಮೊದಲಿಗೆ ತಂದಿರಿಸಿಕೊಳ್ಳಬೇಕು. ಈ ಪ್ರಯೋಗವನ್ನು ಮಾಡಿ ತೋರಿಸುವಾಗ ಸಭಿಕರೆದುರು ಇರಿಸಿದ ಗ್ಲಾಸಿನಲ್ಲಿ ಯಾರಿಗೂ ಕಾಣಿಸದಂತೆ ಕೈಯಲ್ಲಿರಿಸಿಕೊಂಡು ಈ ಪುಡಿಯನ್ನು ಹಾಕಬೇಕು. ತದನಂತರ ರೂಪಾಯಿಯನ್ನು ಹಾಕಿ ಹೊರತೆಗೆದು ಮೆಲ್ಲಗೆ ಕೈ ಕೊಡವಬೇಕು. ಕೈಗೆ ಹತ್ತಿದ ನೀರು ಕೂಡಲೇ ಉದುರಿ ಬಿದ್ದು ಕೈ ಒಣಗದೇ ಉಳಿಯುವದು ಆದರೆ ಯಾವದೇ ಪ್ರಸಂಗದಲ್ಲಿ ಕೈಕೊಡುವದನ್ನು ಮಾತ್ರ ತಪ್ಪಿಸಬಾರದು.

## ಸತ್ತ ಮೀನನ್ನು ನೀರಲ್ಲಿ ಆಡಿಸುವದು

ನದಿಯಿಂದಾಗಲೀ, ಸಮುದ್ರದಿಂದಾಗಲೀ ಸ್ವಲ್ಪ ವೇಳೆಯ ಹಿಂದೆ ಮಾತ್ರ ಹಿಡಿದು ತಂದ ಸತ್ತ ಮೀನನ್ನು ಅಂಕೋಲಿ ಎಣ್ಣೆ ಇಲ್ಲವೇ ಕೇರಿನ ಎಣ್ಣೆಯಿಂದ ಚೆನ್ನಾಗಿ ಉಜ್ಜಿ ಒಂದು ಪಾತ್ರೆಯಲ್ಲಿ ತುಂಬಾ ನೀರು ಹಾಕಿ ಬಿಡಬೇಕು. ಹಾಗೆ ಬಿಟ್ಟಲ್ಲಿ ಆ ಮೀನು ನೀರಲ್ಲಿ ಆಡತೊಡಗುವದು. ಆದರೆ ಕೆರೆಯಿಂದ ಇಲ್ಲವೇ ಸಮುದ್ರದಿಂದ ಆಗಲೇ ತಂದು ಸತ್ತಿರುವ ಮೀನದ ವಿಷಯದಲ್ಲಿ ಮಾತ್ರ ಈ ಪ್ರಯೋಗವನ್ನು ಮಾಡಲು ಬರುವದು.

## ಕಾಗದದಲ್ಲಿ ಪದಾರ್ಥ ಕರಿಯುವದು

ಒಂದು ಕಾಗದವನ್ನು ತೆಗೆದುಕೊಂಡು ಘಟಕ ಹಾಗೂ ಕರ್ಪುರವನ್ನು ಸಣ್ಣಾಗಿ ಅರೆದು ಲೇಪಮಾಡಿ ಆ ಕಾಗದಕ್ಕೆ ಹಚ್ಚಿ ಒಣಗಿಸಬೇಕು. ಹೀಗೆ ೪-೫ ಸಲ ಲೇಪಿಸಿ ಆ ಕಾಗದವನ್ನು ಒಣಗಿಸಬೇಕು. ಈ ರೀತಿ ಕಾಗದವನ್ನು ಸಿದ್ಧಪಡಿಸಿಕೊಂಡ ನಂತರ ಈ ಪ್ರಯೋಗವನ್ನು ಮಾಡಬೇಕು ಕಾಗದದ ಪಾತ್ರೆಯನ್ನು ಸಿದ್ಧಪಡಿಸಿಕೊಂಡು ಸಭಿಕರಿಗೆ ತೋರಿಸಿ ಅದನ್ನು ಒಲೆಯ ಮೇಲಿಟ್ಟು ಅದರಲ್ಲಿ ಎಣ್ಣೆ ಅಥವಾ ತುಪ್ಪವನ್ನು ಹಾಕಿ ಯಾವದೇ

ಪದಾರ್ಥವನ್ನು ಕರಿಯಬಹುದು. ಆ ಕಾಗದವು ಸುಡುವದಿಲ್ಲವೆಂಬದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಬಟ್ಟೆಯಲ್ಲಿ ನೀರು ಸೋಸಿದಾಗ ಆ ನೀರು ಹಾಲಿನಂತೆ ಕಾಣಿಸುವದು

ಸ್ವಲ್ಪ ದಪ್ಪವಾದ ಬಟ್ಟೆಯನ್ನು ತೆಗೆದುಕೊಳ್ಳಬೇಕು. ನಂತರ ಅದನ್ನು ಎಮ್ಮೆಯ ಹಾಲಿನಲ್ಲಿ ನೆನಸಿ ಒಣಗಿಸಬೇಕು. ಹೀಗೆ ಏಳು ಸಾರೆ ನೆನಸಿ ಒಣಗಿಸಬೇಕು. ಈ ರೀತಿ ಬಟ್ಟೆಯನ್ನು ಸಿದ್ಧಪಡಿಸಿಕೊಂಡನಂತರ ಇದರ ಪ್ರಯೋಗವನ್ನು ಮಾಡಬೇಕು. ಸಭಿಕರೆದುರು ಒಂದು ಬಟ್ಟಲಿಗೆ ಈ ಬಟ್ಟೆಯನ್ನು ಕಟ್ಟಿ ಮೇಲಿನಿಂದ ನೀರು ಹಾಕಬೇಕು. ಆ ಹೊತ್ತಿಗೆ ಮಂತ್ರವನ್ನು ಪಠಿಸುವವರಂತೆ ಅಭಿನಯಿಸುತ್ತಿರಬೇಕು. ಒಂದು ನಿಮಿಷದ ನಂತರ ಈ ಬಟ್ಟೆಯನ್ನು ತೆಗೆದು ತೋರಿಸಲಾಗಿ ಆ ಬಟ್ಟೆಯಲ್ಲಿಯ ನೀರು ಹಾಲಿನಂತೆ ಕಂಡು ಬಂದು ಪ್ರೇಕ್ಷಕರು ಸೋಜಿಗಪಡುವರೆಂದು ತಿಳಿದುಕೊಳ್ಳಬೇಕು.

## ಗ್ಲಾಸಿನಲ್ಲಿ ನೀರು ತುಂಬಿ ತಿರುವಿ ಹಿಡಿದಲ್ಲಿ ಬೀಳದಿರುವದು

ಗ್ಲಾಸಿನಲ್ಲಿ ಶರಬತ್ ಇಲ್ಲವೆ ನೀರನ್ನು ತುಂಬಬೇಕು. ಅದರ ಮೇಲೆ ತೆಳುವಾದ ನೀರಿನ ವರ್ಣದ ಕಾಗದವನ್ನು ನೀರಿನಿಂದ ಕಲಿಯುವಂತೆ ಇಟ್ಟಿರಬೇಕು. ಆ ಕಾಗದವನ್ನು ಮೇಣದಿಂದಾಗಲಿ ಮತ್ತಾವ ವಸ್ತುವಿನಿಂದಾಗಲಿ ಬಿಗಿ ಮಾಡಬೇಕು. ಹೀಗೆ ತಯಾರು ಮಾಡಿಕೊಂಡಿರುವ ಗ್ಲಾಸನ್ನು ಮೇಜಿನ ಮೇಲಿರಿಸಬೇಕು. ಸಭಿಕರಿಗೆ ಈ ಪ್ರಯೋಗ ಮಾಡುವದಾಗಿ ತಿಳಿಸಿ ಅದನ್ನು ತಿರುವಿ ಹಿಡಿಯಬೇಕು. ಆಗ ನೀರು ಬೀಳದಿರುವದನ್ನು ಕಂಡು ಪ್ರೇಕ್ಷಕರಿಗೆ ಆಶ್ಚರ್ಯವಾಗುವದು. ಕಾಗದವು ಹರಿಯದಂತೆ ಮಾತ್ರ ನೋಡಿಕೊಳ್ಳಬೇಕು.

## ಬಾಟಲಿಯಲ್ಲಿ ಕೋಳಿಯ ತತ್ತಿಯನ್ನು ಇಳಿಸುವದು

ಕೋಳಿಯ ತತ್ತಿಯೊಂದನ್ನು ತೆಗೆದುಕೊಂಡು ಬರಬೇಕು. ಅದನ್ನು ದ್ರಾಕ್ಷೆಯ ಹುಳಿಯಲ್ಲಿ ೩ ದಿನಗಳ ವರೆಗೆ ನೆನೆಯಿಡಬೇಕು. ಆಗ ಅದು

ಬಹು ಮೆತ್ತಗಾಗುವದು. ನಂತರ ಅದನ್ನು ಬಾಟ್ಲಿಯ ಬಾಯಿಯ ಮೇಲೆ ಇರಿಸಿ ಅದುಮಲು ಆ ತತ್ತಿಯು ಒಳಗೆ ಪ್ರವೇಶಿಸುವದು. ಅಲ್ಲಿ ಅದು ಪುತ್ತೆ ಮೊದಲಿನಂತೆ ಗಟ್ಟಿಯಾಗುವದು. ಈ ಪ್ರಯೋಗದ ಕಾಲದಲ್ಲಿ ಬಾಟಲಿಯನ್ನು ಪ್ರೇಕ್ಷರೆದುರು ಹಿಡಿಯಲು ಅವರು ಅತಿ ಆಶ್ಚರ್ಯ ಚಕಿತರಾಗುವರು.

## ಇದ್ದಲಿ ದೀಪದಂತೆ ಉರಿಯುವದು

ನೆಗ್ಗಲಿಯ ಎಣ್ಣೆಯನ್ನು ತಂಗು ಇದ್ದಲಿಯ ಮೇಲೆ ಚೆನ್ನಾಗಿ ಲೇಪಿಸಿ ನೆರಳಲ್ಲಿ ಒಣಗಿಸಬೇಕು. ಹೀಗೆ ಏಳು ಸಲ ಲೇಪಿಸಿ ಒಣಗಿಸಬೇಕು. ಮೊದಲಿಗೇ ಈ ರೀತಿ ಇದ್ದಲಿ ಸಿದ್ಧಪಡಿಸಿಕೊಂಡು ಪ್ರಯೋಗದ ಕಾಲದಲ್ಲಿ ಸಭಿಕರೆದುರು ಇರಿಸಿ ಮಂತ್ರ ಪಠಿಸುವರಂತೆ ನಟಿಸುತ್ತ ಕಡ್ಡಿ ಕೊರೆದು ಹಚ್ಚಬೇಕು. ಅದು ದೀಪದಂತೆ ಉರಿಯ ತೊಡಗುವದನ್ನು ಕಂಡು ಪ್ರೇಕ್ಷಕರಿಗೆ ಆಶ್ಚರ್ಯವಾಗುವದು.

## ದಾರವನ್ನು ತುಂಡು ಮಾಡಿ ಸುಟ್ಟು ಪುನಃ ದಾರ ಮಾಡುವದು

ಒಂದು ಬಣ್ಣ, ಅಷ್ಟೇ ದಪ್ಪ, ಅಷ್ಟೇ ಉದ್ದವಾಗಿರುವ ಎರಡು ದಾರದ ತುಂಡುಗಳನ್ನು ತೆಗೆದುಕೊಳ್ಳಬೇಕು. ಅದರಲ್ಲಿ ಒಂದನ್ನು ಗುಳಿಗೆಯ ಆಕಾರ ಮಾಡಿ ಬಲಗೈ ಹೆಬ್ಬರಳು ಹಾಗೂ ತರ್ಜನಿ ಬೆರಳುಗಳ ಸಂದಿನಲ್ಲಿ ಅಡಗಿಸಿಕೊಂಡಿರಬೇಕು. ಮತ್ತೊಂದು ದಾರದ ತುಂಡನ್ನು ಪ್ರೇಕ್ಷಕರೆದುರು ಹಿಡಿದು ತುಂಡು ತುಂಡಾಗಿ ಕತ್ತರಿಸಿ ಬೆಂಕಿ ಹಚ್ಚಿ ಸುಟ್ಟು ಹಾಕಬೇಕು. ಅದೇ ಬೂದಿಯನ್ನು ತೆಗೆದುಕೊಂಡು ಮಂತ್ರವನ್ನು ಪಠಿಸುವಂತೆ ನಟಿಸುತ್ತ ಅಡಗಿಸಿಕೊಂಡಿದ್ದ ದಾರದ ಉಂಡಿಯನ್ನು ಕಾಣದ ಹಾಗೆ ಸ್ವಲ್ಪಸ್ವಲ್ಪ ಎಳೆಯಲು ದಾರ ಬರುವದನ್ನು ಕಂಡ ಪ್ರೇಕ್ಷಕರು ಸೋಜಿಗ ಪಡುವರು. ಕೈ ಬೆರಳುಗಳ ಸಂದಿನಲ್ಲಿ ಅಡಗಿಸಿಕೊಂಡಿರುವ ದಾರ ಮಾತ್ರ ಯಾರಿಗೂ ಕಾಣದಂತೆ ನೋಡಿಕೊಳ್ಳಬೇಕು.

## ಬಟ್ಟೆಯನ್ನು ನೀರಿನಲ್ಲಿ ನೆನೆಸಿದರೂ ನೆನೆಯದಂತೆ ಮಾಡುವದು

ಪುದಿನ ಸೊಪ್ಪಿನ ರಸವನ್ನು ತೆಗೆದುಕೊಂಡು ಅದರಲ್ಲಿ ಬಟ್ಟೆಯನ್ನು ನೆನೆಸಿ ನೆರಳಲ್ಲಿ ಒಣಗಿಸಿ ಇದೇ ರೀತಿ ೭ ಸಾರೆ ನೆನೆಸಿ ಒಣಗಿಸಬೇಕು. ಈ ರೀತಿ ಮೊದಲೇ ಬಟ್ಟೆಯನ್ನು ಸಿದ್ಧ ಮಾಡಿಟ್ಟುಕೊಂಡಿರಬೇಕು ನಂತರ ಪ್ರೇಕ್ಷಕರೆದುರು ಈ ಚಮತ್ಕಾರವನ್ನು ಮಾಡಿ ತೋರಿಸಬೇಕು. ಮಂತ್ರಗಳನ್ನು ಜಪಿಸುವವರಂತೆ ನಟಿಸುತ್ತ ಒಂದು ಪಾತ್ರೆಯಲ್ಲಿ ನೀರು ಹಾಕಿ ಈ ಬಟ್ಟೆಯನ್ನು ಹಾಕಬೇಕು. ಆ ಬಟ್ಟೆ ನೆನೆಯುವದಿಲ್ಲ.

## ಝರಡಿಯಲ್ಲಿ ನೀರು ಹಾಕಿದರೂ ಬೀಳದಂತೆ ಮಾಡುವದು

ನೆಗ್ಗಲಿ ಎಣ್ಣೆಯನ್ನು ಝರಡಿಗೆ ಹಚ್ಚಿ ಅದನ್ನು ಚೆನ್ನಾಗಿ ಬಿಸಿಲಲ್ಲಿ ಒಣಗಿಸಬೇಕು. ತರುವಾಯ ಅದನ್ನು ಪ್ರೇಕ್ಷಕರೆದುರು ಈ ಚಮತ್ಕಾರ ಮಾಡುವದಕ್ಕಾಗಿರಿಸಬೇಕು. ಮಂತ್ರಗಳನ್ನು ಪಠಿಸುವವರಂತೆ ನಟಿಸುತ್ತ ಈ ಝರಡಿಯಲ್ಲಿ ನೀರನ್ನು ಹಾಕಬೇಕು. ಆಗ ಝರಡಿಯಿಂದ ನೀರು ಬೀಳುವದಿಲ್ಲ. ಇದನ್ನು ಕಂಡು ಸಭಿಕರು ಆನಂದಭರಿತರಾಗುವರು.

## ನೀರನ್ನು ಗಟ್ಟಿಮಾಡಿ ಪುನಃ ನೀರು ಮಾಡುವದು

ಕಾಮುಕಸ್ತೂರಿಯ ಬೀಜವನ್ನು ಅರೆದು ಪುಡಿಮಾಡಿ ಇಟ್ಟುಕೊಳ್ಳಬೇಕು. ಅಲ್ಲದೇ ಹತ್ತಿರ ಸ್ವಲ್ಪ ಸೈಂಧಲವಣವನ್ನು ಇರಿಸಿಕೊಳ್ಳಬೇಕು. ಪ್ರೇಕ್ಷಕರೆದುರು ಈ ಚಮತ್ಕಾರವನ್ನು ಮಾಡಿತೋರಿಸುವ ಕಾಲದಲ್ಲಿ ಒಂದು ಪಾತ್ರೆಯಲ್ಲಿ ಸ್ವಲ್ಪ ನೀರನ್ನು ಹಾಕಿ ಕಾಮುಕಸ್ತೂರಿ ಬೀಜದ ಪುಡಿಯನ್ನು ತೆಗೆದುಕೊಂಡು ಮಂತ್ರ ಪಠಿಸುವವರಂತೆ ನಟಿಸುತ್ತ ಹಾಕಲಾಗಿ ಆ ನೀರು ಗಟ್ಟಿಯಾಗುವದು. ಪುನಃ ಮಂತ್ರ ಜಪಿಸುವಂತೆ ನಟಿಸುತ್ತ ಸೈಂಧಲವಣವನ್ನು ಹಾಕಲಾಗಿ ನೀರು ಹರಿಯ ತೊಡಗುವದು.

## ಮಳೆಯಲ್ಲಿ ದೀಪವನ್ನಿಟ್ಟು ಉರಿಸುವದು

ಸಮುದ್ರದ ಹೂವು ಗಂಧಕ ಈ ಎರಡನ್ನೂ ಅರೆಯಬೇಕು ಅವನ್ನು ಅರಳಿಯಲ್ಲಿ ಸುತ್ತಿ ಬತ್ತಿ ಮಾಡಿಕೊಳ್ಳಬೇಕು. ಮಳೆ ಬೀಳುವ ಕಾಲದಲ್ಲಿ

ಒಳ್ಳೆಣ್ಣೆ ಹಾಕಿದ ಪಣತಿಯಲ್ಲಿ ಈ ಗಾಲಿನ ಬತ್ತಿಯನ್ನು ಹಾಕಿ ದೀಪ ಹಚ್ಚಬೇಕು. ಆಗ ದೀಪವು ಆರದೇ ಒಂದೇ ಸವನೆ ಉರಿಯುಹತ್ತುವದು

## ಬಿಳಿ ಕಾಗದದ ಮೇಲೆ ಬರಿಯದೇ ಕರಿಅಕ್ಷರ ತೋರಿಸುವದು

ಪೂರ್ವದಲ್ಲಿ ಬಿಳಿಕಾಗದದ ಮೇಲೆ ಉಳ್ಳಿಗಡ್ಡಿಯ ರಸದಿಂದ ಇಲ್ಲವೇ ಎಕ್ಕೆಯ ಹಾಲಿನಿಂದ ಅಕ್ಷರಗಳನ್ನು ಬರೆದಿಟ್ಟುಕೊಂಡಿರಬೇಕು ಪ್ರೇಕ್ಷಕರಿಗೆ ಬಿಳಿ ಕಾಗದದ ಮೇಲೆ ಏನೂ ಬರೆದಂತೆ ಕಾಣುವದಿಲ್ಲ. ಪ್ರೇಕ್ಷಕರೆದುರು ಈ ಚಮತ್ಕಾರವನ್ನು ಮಾಡಿ ತೋರಿಸುವಾಗ ಬೆಂಕಿಯನ್ನು ತರಿಸಿ ಇಟ್ಟು ಮಂತ್ರಗಳನ್ನು ಪಠಿಸುವಂತೆ ನಟಿಸುತ್ತ ಸ್ವಲ್ಪ ಸಾಂಭ್ರಾಣಿ ಪುಡಿಯನ್ನು ಬೆಂಕಿಯ ಮೇಲೆ ಹಾಕಿ ಅದರ ಹೊಗೆಗೆ ಈ ಕಾಗದವನ್ನು ಹಿಡಿಯಬೇಕು. ಆಗ ಅದರಲ್ಲಿ ಕರಿ ಅಕ್ಷರಗಳು ಮೂಡಿರುವದನ್ನು ಪ್ರೇಕ್ಷಕರು ಕಂಡು ಸೋಜಿಗ ಪಡುವದರಲ್ಲಿ ಯಾವ ಸಂದೇಹವೂ ಇಲ್ಲ.

## ತಲೆಯ ಮೇಲೆ ಕಲ್ಲು ಒಡೆಯುವದು

ಆದಿತ್ಯವಾರ ಇಲ್ಲವೇ ಗುರುವಾರ ದಿವಸ ಅಮವಾಸ್ಯೆಯಿರುವಾಗ ಒಂದು ದಿನ ಪೂರ್ವದಲ್ಲಿ ಕುರುಟಿಗನ ಗಿಡವನ್ನು ನೋಡಿಕೊಂಡು ಬರಬೇಕು. ಮರುದಿನ ಅಮವಾಸ್ಯೆಯ ದಿನ ನಸುಕಿನಲ್ಲಿ ಸ್ನಾನ ಪೂಜೆ ವಗೈರೆ ತೀರಿಸಿಕೊಂಡು ಮೌನಿಯಾಗಿ ಹೋಗಿ ಕುರುಟಿಗಿನ ಗಿಡವನ್ನು ವಿಧಿಪೂರ್ವಕವಾಗಿ ಪೂಜಿಸಿ ಆ ಗಿಡದ ಬೇರನ್ನು ತೆಗೆದುಕೊಂಡು ಬರಬೇಕು. ಕಲ್ಲು ತಲೆಯ ಮೇಲಿಟ್ಟು ಒಡೆಯುವ ಸಂದರ್ಭ ಬಂದಾಗ ಕುರುಟಿಗನ ಬೇರನ್ನು ತಲೆಯ ಮೇಲಿಟ್ಟು ಕಬ್ಬಿಣದ ಚಿಮಟಿಗೆಯಿಂದ ಸ್ವಲ್ಪ ಬಡಿದರೆ ತಲೆಗೆ ಸಹ ಘಾಯವಾಗದೇ ಕಲ್ಲು ಒಡೆಯುವದರಲ್ಲಿ ಸಂದೇಹವೇನೂ ಇಲ್ಲ.

## ಕೋಳಿಯು ಗೆಲ್ಲುವದು

ಪುಷ್ಯನಕ್ಷತ್ರವಿರುವ ರವಿವಾರ ದಿನ ಇದ್ದಂತಹ ಯೋಗವನ್ನು ಹುಡುಕಿಕೊಂಡು ನಸುಗುನ್ನಿಯ ಗಿಡವನ್ನು ನೋಡಿಕೊಂಡು ಬರಬೇಕು. ಮರು

ದಿವಸ ನಸುಕಿನಲ್ಲಿ ಅಲ್ಲಿಗೆ ಮಾತನಾಡದಲೇ ಹೋಗಿ ವಿಧಿಪೂರ್ವಕವಾಗಿ ಆ ಗಿಡವನ್ನು ಪೂಜಿಸಿ ಅದರ ಬೇರನ್ನು ತೆಗೆದುಕೊಂಡು ಬರಬೇಕು ಅದನ್ನು ಕೋಳಿ ಇಲ್ಲವೇ ಹುಂಜದ ಕುತ್ತಿಗೆಗೆ ಕಟ್ಟಲಾಗಿ ಅದು ಕಾಳಗದಲ್ಲಿ ನಿಶ್ಚಯವಾಗಿ ಗೆಲ್ಲುವದೆಂದು ತಿಳಿಯಬೇಕು.

## ಸಾಸ್ವಿಗಳು ಒಂದಕ್ಕೊಂದು ಕೂಡಿಕೊಳ್ಳುವದು

ಬಿಳಿಯ ಸಾಸ್ವಿಗಳನ್ನು ತೆಗೆದುಕೊಂಡು ಅವನ್ನು ನಾಯಿಯ ಹಾಲಿನಲ್ಲಿ ನೆನೆ ಇಡಬೇಕು. ಸುಮಾರು ೫-೬ ಗಂಟೆಗಳ ವರೆಗೆ ಹೀಗೆ ನೆನೆಯಿರಿಸಿದ ನಂತರ ಅವನ್ನು ಹೊರಗೆ ತೆಗೆದು ಗಿಡದ ನೆರಳಲ್ಲಿರಿಸಿ ಒಣಗಿಸಬೇಕು. ಈ ಆಟದ ಚಮತ್ಕಾರವನ್ನು ಪ್ರೇಕ್ಷಕರೆದುರು ತೋರಿಸುವ ಸಮಯದಲ್ಲಿ ಸಾಸ್ವಿಗಳನ್ನು ನೆಲದ ಮೇಲೆ ಚೆಲ್ಲಿ ಮೇಲೆ ಸ್ವಲ್ಪ ಸ್ವಲ್ಪ ನೀರನ್ನು ಚಿಮುಕಿಸಬೇಕು. ಅಂದರೆ ಅವೆಲ್ಲ ಸಾಸ್ವಿಗಳು ಕೂಡಲೇ ಒಂದಕ್ಕೊಂದು ಕೂಡಿಕೊಂಡು ನೋಡುವವರಲ್ಲಿ ಸೋಜಿಗವಾಗುವದು

## ರಾಕ್ಷಸನಂತೆ ಕಾಣುವದು

ಮಂಗಳವಾರ ಅಮಾವಾಸ್ಯೆಯು ಇರುವಂತಹ ದಿನವೊಂದನ್ನು ಕಂಡುಹಿಡಿಯಬೇಕು. ಅಂದು ಒಂದು ಸೊಂಡಿ ಇಲಿಯನ್ನು ಹಿಡಿದು ಕೊಲ್ಲಬೇಕು, ಅದನ್ನು ಸ್ಮಶಾಕ್ಕೊಯ್ದು ಸುಟ್ಟು ಬೂದಿ ಮಾಡಿ ಆ ಬೂದಿಯನ್ನು ಮೈಗೆಲ್ಲ ಲೇಪಿಸಿಕೊಳ್ಳಲು ನೋಡುವವರ ದೃಷ್ಟಿಗೆ ರಾಕ್ಷಸನಂತೆ ಕಾಣಬರುವದರಲ್ಲಿ ಸಂದೇಹವೇನೂ ಇಲ್ಲ.

## ನಾಯಿಯು ಕುಣಿಯುವದು

ದಾಲಚಿನ್ನಿ ಪುಡಿಯನ್ನು ಹಿಟ್ಟಿನಲ್ಲಿ ಕಲಿಸಿ ರೊಟ್ಟಿಯನ್ನು ಸಿದ್ಧಪಡಿಸಬೇಕು. ಅದನ್ನು ನಾಯಿಗೆ ತಿನ್ನಿಸಲಾಗಿ ಅದು ತನ್ನಷ್ಟಕ್ಕೆ ತಾನೇ ಕುಣಿಯತೊಡಗುವದು. ಆದರಿಂದ ಜನರು ಆಶ್ಚರ್ಯಪಡುವರು.

## ಮಣ್ಣನ್ನು ಸಕ್ಕರೆಯನ್ನಾಗಿ ಸಕ್ಕರೆಯನ್ನು ಮಣ್ಣನ್ನಾಗಿ ಮಾಡುವದು

೯ ಇಂಚು ಉದ್ದ ಸುತ್ತಳತೆಯುಳ್ಳ ಒಂದು ಟಿನ್ನಿನ ಭರಣಿ ಎರಡು ಕಡೆ ಮುಚ್ಚಳವಿಲ್ಲದ್ದನ್ನು ಮಾಡಿಸಬೇಕು. ೭ ಅಂಗುಲದ ಮತ್ತೊಂದು ಭರಣಿ ಮಾಡಿಸಿ ಮೊದಲಿನ ಭರಣಿಗೆ ಸರಿಹೋಗುವಂತೆ ಎರಡು ಕಡೆ ಮುಚ್ಚಳಗಳನ್ನು ಮಾಡಿಸಬೇಕು. ಇವು ಗುರ್ತು ಹಿಡಿಯುವಂತಿರಬಾರದು. ಒಳಕ್ಕೆ ಸೇರುವ ಸ್ಥಳದಲ್ಲಿ ಉತ್ತಮವಾದ ಬಣ್ಣವನ್ನು ಹಚ್ಚಬೇಕು. ಸುತ್ತಲೂ ಒಂದೊಂದು ಅಂಗುಲ ಹೆಚ್ಚು ಬಣ್ಣವನ್ನು ಹಚ್ಚಬೇಕು. ನಡು ಇರಿಸುವ ಭರಣಿಯ ಮಧ್ಯದಲ್ಲಿ ಟಿನ್ನಿನ ದುಂಡಾಕಾರದ ಬಿಲ್ಲೆಯನ್ನು ಹೊಂದಿಸಿರಬೇಕು. ಅದರಿಂದ ಎರಡು ಭಾಗಗಳಾಗುವವು. ಒಂದು ಕಡೆ ಸಕ್ಕರೆ ಇನ್ನೊಂದು ಕಡೆ ಮಣ್ಣನ್ನು ಹಾಕಿ ಮುಚ್ಚಬೇಕು. ಈ ಚಮತ್ಕಾರವನ್ನು ಮಾಡುವ ಕಾಲದಲ್ಲಿ ಮಣ್ಣಿರುವ ಕಡೆಯ ಮುಚ್ಚಳವನ್ನು ತೆಗೆದು ಇಗೋ ಈ ಮಣ್ಣನ್ನು ಸಕ್ಕರೆಯಾಗಿ ಮಾಡುವೆನೆಂದು ಹೇಳಿ ಈ ಪೆಟ್ಟಿಗೆಯನ್ನು ಕೈಯಲ್ಲಿ ಹಿಡಿದು ಮಂತ್ರಗಳನ್ನು ಜಪಿಸುವಂತೆ ನಟಿಸುತ್ತ ಸಕ್ಕರೆ ಇರುವ ಕಡೆಯ ಮುಚ್ಚಳವನ್ನು ತೆಗೆದು ತೋರಿಸಬೇಕು. ನಂತರ ಅದನ್ನು ಮುಚ್ಚಿ ಇಗೋ ಈ ಸಕ್ಕರೆಯನ್ನು ಪುನಃ ಮಣ್ಣನ್ನು ಮಾಡುವದಾಗಿ ಹೇಳಿ ಮಂತ್ರ ಜಪಿಸುವಂತೆ ನಟಿಸುತ್ತ ಮಣ್ಣಿರುವ ಮುಚ್ಚಳವನ್ನು ತೆಗೆದು ತೋರಿಸಬೇಕು. ಜನರು ಇದನ್ನು ನೋಡಿ ಸೋಜಿಗಪಡುವರು.

## ನೀರಲ್ಲಿ ಹಾಕಿದ ಕೂಡಲೇ ಕಮಲ ಬೀಜಗಳು ಬಳ್ಳಿ ಹೂವು ಆಗುವದು

ಅಂಕೋಲಿಯ ಎಣ್ಣೆಯಲ್ಲಿ ಕಮಲದ ಬೀಜಗಳನ್ನು ನೆನೆಯಿಟ್ಟು ನಂತರ ಗಿಡದ ನೆರಳಲ್ಲಿ ಒಣಗಿಸಬೇಕು ಈ ರೀತಿ ೧೧ ಸಲ ನೆನೆಯಿಟ್ಟು ಒಣಗಿಸಬೇಕು. ಈ ಚಮತ್ಕಾರವನ್ನು ಮಾಡಿ ತೋರಿಸುವ ಕಾಲದಲ್ಲಿ ಒಂದು ಗ್ಲಾಸಿನಲ್ಲಿ ನೀರು ಹಾಕಿಡಬೇಕು. ಮಂತ್ರವನ್ನು ಜಪಿಸುವವರಂತೆ ನಟಿಸುತ್ತ ಬೀಜಗಳನ್ನು ತೆಗೆದುಕೊಂಡು ನೀರಲ್ಲಿ ಹಾಕಲು ತಕ್ಷಣವೇ

ಬಳ್ಳಿಯಾಗಿ ಹೂವುಬಿಡುವದು. ನೋಡುವವರ ಕಣ್ಣಿಗೆ ಇದು ಚಮತ್ಕಾರ ವಾಗಿ ಅವರು ಆಶ್ಚರ್ಯ ಚಕಿತರಾಗುವರು.

## ದೀಪ ನೊಂದಿಸಿ ಪುನಃ ಹತ್ತುವಂತೆ ಮಾಡುವದು

ಗಂಧಕ ಅರದಾಳ ಕರ್ಪೂರಗಳನ್ನು ತೆಗೆದುಕೊಂಡು ಸಣ್ಣಾಗಿ ಪುಡಿ ಮಾಡಿ ಅರೆದು ಇಟ್ಟುಕೊಂಡಿರಬೇಕು. ಚಮತ್ಕಾರ ಮಾಡಿ ತೋರಿಸುವ ಮೊದಲೇ ಅದನ್ನು ಬೂದಿಯಲ್ಲಿ ಹಾಕಿ ಇಟ್ಟುಕೊಳ್ಳಬೇಕು. ಚಮತ್ಕಾರದ ಕಾಲದಲ್ಲಿ ದೀಪವನ್ನು ಆರಿಸಿ ಮಂತ್ರವನ್ನು ಜಪಿಸುವವರಂತೆ ನಟಿಸುತ್ತ ದೀಪವನ್ನು ಆರಿಸಿದಕೂಡಲೇ ಈ ಮಿಶ್ರಣವನ್ನು ಚೆಲ್ಲಬೇಕು. ಅಂದರೆ ದೀಪವು ಪುನಃ ಹತ್ತುವದು.

## ಪೆಟ್ಟಿಗೆಯಲ್ಲಿ ಪಕ್ಷಿಯನ್ನು ಹಾಕಿ ಮಾಯ ಮಾಡಿ ಪುನಃ ತೆಗೆಯುವದು

ಒಂದಡಿ ಎತ್ತರವಾಗಿರುವಂತಹ ಚಚ್ಚೌಕ ಸಣ್ಣ ಪೆಟ್ಟಿಗೆಯನ್ನು ಮಾಡಿಸಿ ಅದರ ಮಧ್ಯಭಾಗದಲ್ಲಿ ಒಂದು ಹಲಿಗೆಯನ್ನು ತಳದಂತೆ ಹೊಂದಿಸಿರಬೇಕು ಪೆಟ್ಟಿಗೆಯು ಹಿಂದೆ ಎರಡು ಮುಚ್ಚಳಗಳನ್ನು ಹೊರಗಿನವರಿಗೆ ಕಾಣಿಸದ ಹಾಗೆ ಮಾಡಿಸಬೇಕು. ಮಧ್ಯ ಸುತ್ತಲೂ ಪೆಟ್ಟಿಗೆಗೆ ಮುಚ್ಚಳ ಕೂಡುವ ಸ್ಥಳದಲ್ಲಿ ಯಾವದಾದರೊಂದು ಬಣ್ಣ ಹಚ್ಚಿ ಇತರ ಸ್ಥಳಗಳಲ್ಲಿ ಸಹ ಬಣ್ಣ ಹಚ್ಚಬೇಕು. ಇದರಿಂದ ಪೆಟ್ಟಿಗೆಗೆ ಎರಡು ಮುಚ್ಚಳಗಳು ಇದ್ದಂತೆ ಕಂಡು ಬರುವದಿಲ್ಲ. ಈ ಚಮತ್ಕಾರವನ್ನು ಮಾಡುವ ಕಾಲದಲ್ಲಿ ಪಕ್ಷಿಯನ್ನು ಒಂದು ಮುಚ್ಚಳ ತೆಗೆದು ಹಾಕಬೇಕು. ಮೇಜಿನ ಮೇಲಿಡುವಾಗ ಚಮತ್ಕೃತಿಯಿಂದ ಪಕ್ಷಿಯಿರುವ ಭಾಗ ಕೆಳಗಾಗಿರುವಂತೆ ಮಾಡಿ ಉತ್ತ ಇರುವ ಭಾಗ ಮೇಲೆ ಬರುವಂತೆ ಇಡಬೇಕು. ಕೆಲ ವೇಳೆ ಮಂತ್ರ ಜಪಿಸುತ್ತಿರುವಂತೆ ನಟಿಸಿ ಪೆಟ್ಟಿಗೆಯ ಮುಚ್ಚಳವನ್ನು ತೆಗೆಯಲು ಅದರಲ್ಲಿ ಏನೂ ಇರದದ್ದನ್ನು ಪ್ರೇಕ್ಷಕರು ಕಾಣುವರು. ನಂತರ ಪಕ್ಷಿಯನ್ನು ಮತ್ತೆ ಬರಿಸುವದಾಗಿ ಹೇಳಿ ಪೆಟ್ಟಿಗೆಯನ್ನು ಕೈಯಲ್ಲಿ ತೆಗೆದು

ಕೊಂಡು ಮುಚ್ಚಳವನ್ನು ಮುಚ್ಚಿ ಮೇಜಿನ ಮೇಲೆ ಇಡುವ ಕಾಲಕ್ಕೆ ಚಮತ್ಕೃತಿಯಿಂದ ತಿರುವು ಮುರುವು ಮಾಡಿ ಪಕ್ಷಿಯಿರುವ ಭಾಗ ಮೇಲೆ ಬರುವಂತೆ ಇಡಬೇಕು. ಕೆಲ ಹೊತ್ತು ಮಂತ್ರ ಜಪಿಸುತ್ತಿರುವಂತೆ ನಟಿಸಬೇಕು ನಂತರ ಮುಚ್ಚಳ ತೆರೆಯಲಾಗಿ ಪಕ್ಷಿಯನ್ನು ನೋಡಿ ಪ್ರೇಕ್ಷಕರು ಸೋಜಿಗ ಪಡುವರು.

## ಕೈ ಬೆಂಕಿಯ ಹಾಗೆ ಪ್ರಜ್ವಲಿಸುವಂತೆ ಮಾಡುವದು

೧ ಔಂಸ ಫಾಸ್ಫರಸನ್ನು ತರಬೇಕು ಮತ್ತು ೧ ಔಂಸ ಗಂಧಕವನ್ನು ತೆಗೆದುಕೊಳ್ಳಬೇಕು, ಗಂಧಕವನ್ನು ಸಣ್ಣಾಗಿ ಅರೆದು ಅದರಲ್ಲಿ ಫಾಸ್ಫರಸವನ್ನು ಕೂಡಿಸಬೇಕು, ಈ ಮಿಶ್ರಣವನ್ನು ಕಿಸೆಯಲ್ಲಿ ಬಹು ಜೋಕೆಯಿಂದ ಇರಿಸಿಕೊಳ್ಳಬೇಕು, ಪ್ರೇಕ್ಷಕರೆದುರು ನೀವು ಈ ಚಮತ್ಕಾರವನ್ನು ಮಾಡಿ ತೋರಿಸುವ ಕಾಲದಲ್ಲಿ ಕಿಸೆಯಲ್ಲಿ ಕೈಯಿರಿಸಿಕೊಂಡು ಮಂತ್ರಗಳನ್ನು ಪಠಿಸುವಂತೆ ನಟಿಸುತ್ತ ನಿಂತು ಕೈಯಲ್ಲಿ ಕಿಸೆಯಲ್ಲಿದ್ದ ಮಿಶ್ರಣದೊಂದಿಗೆ ಚೆನ್ನಾಗಿ ತಿಕ್ಕಬೇಕು, ಅದು ಕೈಗೆ ಚೆನ್ನಾಗಿ ಹತ್ತಿಕೊಂಡಿದೆ ಎಂದು ಅನಿಸಿದ ನಂತರ ಕೈ ಹೊರಗೆ ತೆಗೆದು ಕತ್ತಲಲ್ಲಿ ಹಿಡಿದು ತೋರಿಸಬೇಕು, ಆಗ ಅದು ಬೆಂಕಿಯಂತೆ ಪ್ರಜ್ವಲಿಸುವ ಹಾಗೆ ಕಂಡು ಬರುವದು, ಈ ಪರಿಣಾಮವು ಬಹಳ ಹೊತ್ತಿನ ವರೆಗೆ ಉಳಿಯುವದಿಲ್ಲವಾದ್ದರಿಂದ ಎಲ್ಲರಿಗೂ ತೋರಿಸುವದಾದ ಮೇಲೆ ಕೈಯನ್ನು ಪುನಃ ಜೇಬಿನಲ್ಲಿ ಸೇರಿಸಿಟ್ಟುಕೊಳ್ಳಬೇಕು.

## ಬಾವಿಯಿಂದ ಹಾಲಿನ ಬಣ್ಣದ ನೀರು ತೆಗೆಯುವದು

ಔಡಲ ಪಪ್ಪು ಹಾಗೂ ಫಟಕ ಈ ಎರಡನ್ನೂ ನೀರಿನಲ್ಲಿ ಸೇರಿಸಿ ಚೆನ್ನಾಗಿ ಅರೆಯಬೇಕು, ಅದನ್ನು ಒಂದು ಬಟ್ಟಲಿಗಾಗಲಿ, ತಂಬಿಗೆಗಾಗಲಿ ಹಚ್ಚಿ ನೆರಳಲ್ಲಿ ಒಣಗಿಸಬೇಕು, ಈ ರೀತಿ ಏಳು ಸಲ ಮಿಶ್ರಣ ಹಚ್ಚಿ ಒಣಗಿಸಿ ಅದನ್ನು ಸಿದ್ಧಪಡಿಸಿಕೊಳ್ಳಬೇಕು, ಪ್ರೇಕ್ಷಕರೆದುರು ಈ ತಮಾಷೆ ಮಾಡಿ ತೋರಿಸುವಾಗ ಬಾವಿಯಲ್ಲಿ ಬಟ್ಟಲನ್ನಾಗಲಿ ತಂಬಿಗೆಯನ್ನಾಗಲಿ ಬಿಟ್ಟು ನೀರು ಸೇರಿ ತೆಗೆಯಬೇಕು, ಮೇಲೆ ತೆಗೆಯುವಾಗ ಕೆಲ ಹೊತ್ತು ಮಂತ್ರ

ಪಠಿಸುವಂತೆ ನಟಿಸಿ ನೀರು ಸೇದಿ ತೆಗೆಯಬೇಕು, ಆಗ ಅದರಲ್ಲಿಯ ನೀರಿನ ಬಣ್ಣವು ಹಾಲಿನ ಬಣ್ಣದಂತಿರುವದನ್ನು ಕಂಡು ನೋಡುವವರು ಆಶ್ಚರ್ಯ ಹೊಂದುವರು.

## ಮಂಜಿನಿಂದ ಬೆಂಕಿ ಮಾಡಿ ಮಾಯ ಮಾಡುವದು

೧ ಪಾತ್ರೆಯಲ್ಲಿ ನೀರು ಹಾಕಿ ಅದರಲ್ಲಿ ಸ್ವಲ್ಪ ಅಂಕೋಲಿ ಎಣ್ಣೆಯನ್ನು ಸೇರಿಸಿ ಅದರಲ್ಲಿ ೧ ಸೂಜಿಗಲ್ಲನ್ನು ಹಾಕಬೇಕು, ತದನಂತರ ಈ ಪಾತ್ರೆಯನ್ನು ಒಲೆಯ ಮೇಲಿರಿಸಿ ಸ್ವಲ್ಪೇ ಉರಿಯಿಂದ ಕಾಸಬೇಕು, ಹೀಗೆ ಕಾಸಿದ ನಂತರ ಅದು ಮಂಜಿನಂತೆ ಗಟ್ಟಿಯಾಗುವವುದು, ಈ ಚಮತ್ಕಾರವನ್ನು ಪ್ರೇಕ್ಷಕರೆದುರು ಮಾಡಿ ತೋರಿಸುವಾಗ ಈ ರೀತಿ ಸಿದ್ಧಪಡಿಸಿಕೊಂಡ ಕಲ್ಲನ್ನು ಮೇಜಿನ ಮೇಲೆ ಇಡಬೇಕು, ಮಂತ್ರವನ್ನು ಜಪಿಸುವವರಂತೆ ನಟಿಸುತ್ತ ಸ್ಪಿರಿಟ್ ಆಫ್ ಸ್ಪಿಟ್ಸ ಸ್ವಲ್ಪ ಆ ಕಲ್ಲಿನ ಮೇಲೆ ಹಾಕಬೇಕು, ಆಗ ಬೆಂಕಿ ಹತ್ತಿದಂತೆ ಕಾಣುವದಲ್ಲದೇ ಆ ಕಲ್ಲು ಸ್ವಲ್ಪವೂ ಉಳಿಯದಂತೆ ಕರಗಿ ಹೋಗಿ ಪ್ರೇಕ್ಷಕರು ಆಶ್ಚರ್ಯದಲ್ಲಿ ಮುಳುಗುವಂತಾಗುವದು.

## ಬಾಯಿಯಿಂದ ಬೆಂಕಿಯನ್ನು ಸುರಿಸುವದು

ರಾಳ ಹಾಗೂ ಕಪ್ಪೆಯ ನೆಣ ಇವನ್ನು ಚೆನ್ನಾಗಿ ಅರೆದು ಬಿಸಿಲಿನಲ್ಲಿ ಇಡಲು ನೆಣವೆಲ್ಲ ಕರಗಿ ಹೋಗಿ ಶುದ್ಧ ರಾಳವು ಸಿಗುವದು, ನಂತರ ಅದನ್ನು ಮಳೆ ನೀರಲ್ಲಿ ತೊಳೆಯಬೇಕು, ಆ ಮೇಲೆ ೩ ದಿನ ಬಿಸಿಲಲ್ಲಿ ಒಣಗಿಸಬೇಕು, ಹೀಗೆ ಸಿದ್ಧವಾದ ರಾಳವನ್ನು ೧ ಸೀಸೆಯಲ್ಲಿ ಹಾಕಿ ತುಂಬಿರಿಸಿಕೊಳ್ಳಬೇಕು, ಈ ಚಮತ್ಕಾರವನ್ನು ಮಾಡುವ ಮೊದಲು ರಾಳವನ್ನು ಬಹು ಗೌಪ್ಯ ರೀತಿಯಲ್ಲಿ ಬಾಯಲ್ಲಿರಿಸಿಕೊಂಡಿರಬೇಕು, ಪ್ರೇಕ್ಷಕರೆದುರು ಈ ಚಮತ್ಕಾರವನ್ನು ಮಾಡುವ ಕಾಲದಲ್ಲಿ ಒಂದು ಬಟ್ಟೆಯಲ್ಲಿ ಬೆಂಕಿ ಇಟ್ಟು ಊದಿದರೆ ಆ ಬಟ್ಟೆಯಲ್ಲಿ ಉರಿಯೇಳುವದು, ಅದನ್ನು ಬಾಯಲ್ಲಿ ತೆಗೆದುಕೊಂಡು ಬೇಗ ಬೇಗ ಊದಬೇಕು, ನಾಲಿಗೆ ಬಾಯಿ ಸ್ವಲ್ಪವೂ ಆದರೆ ೫-೬ ಸಲಕ್ಕಿಂತ ಹೆಚ್ಚು ಸಲ ಶ್ವಾಸವನ್ನು ಬಿಡಬಾರದು, ನಂತರ

ಬಟ್ಟೆಯಿಂದ ಬಾಯಿಯನ್ನು ಒರೆಸಿಕೊಂಡು ಬಿಡಬೇಕು, ಇದು ಸ್ವಲ್ಪ ಕಷ್ಟ ಸಾಧ್ಯವಾದ ಚಮತ್ಕಾರವಾಗಿರುವದನ್ನು ಲಕ್ಷಿಸಿ ಬಹು ಲಕ್ಷಪೂರ್ವಕವಾಗಿ ಈ ಚಮತ್ಕಾರವನ್ನು ಮಾಡಬೇಕೆಂಬದನ್ನು ಲಕ್ಷದಲ್ಲಿಡಿರಿ.

## ಒಂದೇ ಆಕಳಿಂದ ಎರಡು ತರದಹಾಲು ಹಿಂಡಿ ತೋರಿಸುವದು

ಗುರುವಾರ ಇಲ್ಲವೇ ಆದಿತ್ಯವಾರ ಗ್ರಹಣವಾಗಿರುವ ಸಮಯವನ್ನು ನೋಡಿಕೊಂಡು ಚಿತ್ರಮೂಲಂಡ ಬೇರನ್ನು ಯಥಾವಿಧಿಯಾಗಿ ಪೂಜಿಸಿದ ನಂತರ ತರಬೇಕು, ಅದನ್ನು ತೇಯಿದು ಲೇಪವನ್ನು ಸಿದ್ಧಪಡಿಸಿಕೊಳ್ಳಬೇಕು ಈ ಲೇಪವನ್ನು ಒಂದು ಆಕಳ ೨ ಮೊಲೆಗಳಿಗೆ ಹಚ್ಚಿಡಬೇಕು, ಈ ಚಮತ್ಕಾರವನ್ನು ಪ್ರೇಕ್ಷಕರೆದುರು ಮಾಡಿ ತೋರಿಸುವ ಕಾಲದಲ್ಲಿ ಆಕಳನ್ನು ಸಭಿಕರೆದುರು ತಂದು ನಿಲ್ಲಿಸಬೇಕು, ಒಬ್ಬರಿಗೆ ಹಾಲು ಕರೆಯುವಂತೆ ತಿಳಿಸಿ ನೀವು ಮಂತ್ರವನ್ನು ಪಠಿಸುವವರಂತೆ ನಟಿಸುತ್ತ ನಿಲ್ಲಬೇಕು, ಬೇರು ತೇಯಿದು ಹಚ್ಚಿದ ಕಡೆಗೆ ಕೆಂಪು ಹಾಲು ಹಾಗೂ ಉಳಿದ ಕಡೆಗೆ ಸಾದಾ ಅಂದರೆ ಬಿಳಿಯ ಹಾಲೇ ಬರುವದು, ಪುನಃ ಒಂದೇ ರೀತಿ ಹಾಲು ಬರುವಂತೆ ಮಾಡುತ್ತೇನೆಂದು ಹೇಳಲಾಗಿ ಆ ಮೊಲೆಗಳಿಗೆ ಹಚ್ಚಿದ ಲೇಪ ಮೆಲ್ಲಗೆ ಒರೆಸಿ ಹಿಂಡಲಾಗಿ ಎರಡೂ ಕಡೆಗೆ ಬಿಳಿಯ ಹಾಲೇ ಬರುವದನ್ನು ನೋಡಿ ಪ್ರೇಕ್ಷಕರು ದಂಗು ಬಡೆದು ನಿಲ್ಲುವರು

## ಬದನೇಕಾಯಿ ಹಾಗೂ ದಾರ ಸುಟ್ಟರೂ ಸುಡದಂತೆ ಮಾಡುವದು

ಬದನಿಕಾಯಿ ಹಾಗೂ ದಾರವನ್ನು ಅಂಕೋಲಿ ಎಣ್ಣೆಯಲ್ಲಿ ಚೆನ್ನಾಗಿ ಎದ್ದಿಡಬೇಕು, ದಾರವನ್ನು ಈ ಬದನಿಕಾಯಿಗೆ ಕಟ್ಟಬೇಕು, ಈ ರೀತಿ ಮೊದಲು ಸಿದ್ಧಪಡಿಸಿಕೊಂಡ ನಂತರ ಈ ಚಮತ್ಕಾರವನ್ನು ಪ್ರೇಕ್ಷಕರೆದುರು ಮಾಡಿತೋರಿಸಬಹುದು, ಪ್ರೇಕ್ಷಕರೆದುರು ಬೆಂಕಿಯನ್ನು ಸಿದ್ಧಮಾಡಿ ಅದರಲ್ಲಿ ಇವೆರಡನ್ನು ಹಾಕಬೇಕು, ಆ ಕಾಲದಲ್ಲಿ ಮಂತ್ರಗಳನ್ನು ಪಠಿಸುವವರಂತೆ ನಟಿಸುತ್ತ ಇರಬೇಕು, ಕೆಲಹೊತ್ತಿನ ನಂತರ ಬದನೇಕಾಯಿ ಹಾಗೂ ದಾರ ಹೊರಗೆ ತೆಗೆದು ಪ್ರೇಕ್ಷಕರಿಗೆ ತೋರಿಸಬೇಕು, ಬೆಂಕಿಯಲ್ಲಿ ಹಾಕಿದರೂ ಸುಡದಿರುವ ಈ ಸೋಜಿಗ ನೋಡಿದವರು ಆಶ್ಚರ್ಯರಾಗುವರು.

### ಹಸಿರು ಗಿಡವನ್ನು ಬಿಳಿಯದನ್ನಾಗಿ ಮಾಡುವದು

ಈ ಚಮತ್ಕಾರ ಮಾಡಿ ತೋರಿಸುವದಕ್ಕಾಗಿ ಒಂದು ಸಣ್ಣ ಹಸಿರು ಸಸಿಯನ್ನು ಕಿತ್ತಿ ತಂದು ಒಂದು ಗ್ಲಾಸಿನಲ್ಲಿ ಸ್ವಲ್ಪ ಮಣ್ಣು ಹಾಕಿ ಅದರಲ್ಲಿ ರಿಸಬೇಕು, ಮೇಜಿನ ಮೇಲಿರಿಸಿ ಈ ಚಮತ್ಕಾರ ಮಾಡಿ ತೋರಿಸುವದಾಗಿ ಪ್ರೇಕ್ಷಕರಿಗೆ ಹೇಳಬೇಕು. ಧೂಪಾರತಿಯಲ್ಲಿ ಬೆಂಕಿ ಹಾಕಿ ಮಂತ್ರ ಜಪಿಸುವಂತೆ ನಟಿಸುತ್ತ ಧೂಪಾರತಿಯನ್ನು ಗಿಡದ ಕೆಳಗಿರಿಸಿ ಸ್ವಲ್ಪ ಗಂಧಕದ ಪುಡಿ ಹಾಕಲು ಅದರ ಹೊಗೆ ಎದ್ದು ಗಿಡಕ್ಕೆ ಸೋಂಕಿದ ಕೂಡಲೇ ಗಿಡವು ಬಿಳಿಯದಾಗುವದೆಂದು ತಿಳಿಯಬೇಕು. ಆದರೆ ಗಂಧಕ ಹಾಕುವಾಗ ಬಹಳ ಹುಷಾರಿಯಿಂದ ವರ್ತಿಸಲಿಕ್ಕೆ ಬೇಕು.

### ನೀರಿನಲ್ಲಿ ಕರಗದ ಬತ್ತಾಸ

೧ ಬತ್ತಾಸವನ್ನು ಎಣ್ಣೆಯಲ್ಲಿ ಹಾಕಿ ನೆನೆಸಿಕೊಂಡು ತಯಾರಿಸಿ ಕೊಂಡಿರಬೇಕು, ಈ ಚಮತ್ಕಾರವನ್ನು ಮಾಡುವ ಸಮಯದಲ್ಲಿ ಕಿಸೆಯಿಂದ ಬತ್ತಾಸ ತೆಗೆದು ಪ್ರೇಕ್ಷಕರಿಗೆ ತೋರಿಸಿ ನೀರಿನಲ್ಲಿ ಹಾಕಬೇಕು, ಆಗ ಮಂತ್ರಗಳನ್ನು ಜಪಿಸುತ್ತಿರುವವನಂತೆ ನಟಿಸಬೇಕು, ಬತ್ತಾಸ ನೆನೆಯದಿರುವದನ್ನು ನೋಡಿ ನೋಡುವವರೆಲ್ಲರೂ ಸೋಜಿಗ ಪಡುವರು.

### ನೀರು ತುಂಬಿದ ಗಡಿಗೆ ಒಡೆದರೂ ನೀರು ಸೋರದಿರುವದು

ಈ ಚಮತ್ಕಾರಡ ಮೊದಲು ೧ ಗಡಿಗೆ ತೆಗೆದುಕೊಂಡು ಅದರಲ್ಲಿ ನೀರು ತುಂಬಬೇಕು, ಗ್ವಾಪಿನ ಬೇರನ್ನು ಅರೆದು ಈ ಗಡಿಗೆಯಲ್ಲಿಯ ನೀರಿನಲ್ಲಿ ಹಾಕಿ ಕಲಿಸಬೇಕು, ನೋಡುವವರೆದುರು ಈ ಗಡಿಗೆ ಒಡೆದು ಮಂತ್ರಗಳನ್ನು ಪಠಿಸುವವರಂತೆ ನಟಿಸುತ್ತ ನಿಲ್ಲಬೇಕು, ಆಗ ನೀರು ಸೋರುವದಿಲ್ಲ ಇದು ನೋಡುವವರಿಗೆ ಆಶ್ಚರ್ಯವನ್ನುಂಟು ಮಾಡುವದು.

### ಆಕಾಶ ಬಣ್ಣದ ಕಪ್ಪು ಹತ್ತಿ ಬೆಳೆಯುವದು

ಮಂಜಿಷ್ಟ, ಮೆಣಸು, ಅಮೃತಬಳ್ಳಿ ಎಲೆ, ಎಳ್ಳು, ಹುಣಸೆಬೀಜ, ಜವೆಗೋದಿ ಇವನ್ನೆಲ್ಲ ಹತ್ತಿಯ ಗಿಡದ ಸುತ್ತಲೂ ಹಾಕಿ ನೀರು ಹಾಕುತ್ತ ಬರ

ಬೇಕು, ಆಗ ಅಲ್ಲಿಯ ಹತ್ತಿಯು ಆಕಾಶ ಬಣ್ಣದ ಕಪ್ಪು ಹತ್ತಿಯಾಗಿ ಬೆಳೆಯುವದನ್ನು ಕಾಣಬಹುದು.

## ಬೆಂಕಿ ಹತ್ತದಿರುವದು

ರವಿವಾರ ದಿವಸ ವೇದವೃಕ್ಷದ ಬೇರನ್ನು ತರಬೇಕು, ಕುದುರೆಯ ಖುರವನ್ನು ತೆಗೆದುಕೊಂಡು ಎರಡನ್ನೂ ಸೇರಿಸಿ ಸಣ್ಣಾಗಿ ಅರೆಯ ಬೇಕು, ಈ ಮಿಶ್ರಣವನ್ನು ಯಾವ ಒಲೆಯ ಬೂದಿಯಲ್ಲಿ ಸೇರಿಸಿ ಇಡುವಿರೋ ಅಲ್ಲಿ ಬೆಂಕಿಯಾಗುವದಿಲ್ಲ, ಎಷ್ಟೇ ಬೆಂಕಿ ಹಾಕಿದರೂ ಹೊಗೆ ಮಾತ್ರ ಬರುವದಲ್ಲದೇ ಬೆಂಕಿ ಏಳುವದಿಲ್ಲ.

## ಕಬ್ಬಿಣ ಪಟ್ಟಿಯ ಮೇಲೆ ಬರೆಯುವದು

ನವಸಾಗರ ಹಾಗೂ ಮೈಲು ತುತ್ತೆ ಇವನ್ನು ಲಿಂಬಿಹಣ್ಣಿನ ರಸದಲ್ಲಿ ಸಣ್ಣಾಗಿ ಅರೆಯಬೇಕು, ಈ ರೀತಿ ತಯಾರಿಸಿದ ಲೇಪದಿಂದ ಕಬ್ಬಿಣದ ಮೇಲೆ ಬರೆದು ಅದನ್ನು ನೆರಳಲ್ಲಿಯೇ ಒಣಗಿಸಬೇಕು. ಆಗ ಅದರಮೇಲೆ ಬರೆದ ಎಲ್ಲ ಅಕ್ಷರಗಳೂ ಸುಸ್ಪಷ್ಟವಾಗಿ ಕಾಣಿಸತೊಡಗುವವೆಂದು ತಿಳಿದುಕೊಳ್ಳಬೇಕು.

# ಸಾಧನೆ ಮಾಡಲು ಯಾರು ಅಧಿಕಾರಿಗಳು ?

ತಾಂತ್ರಿಕ ಧರ್ಮವು ಆದಿ ಕಾಲದಿಂದಲೂ ವೈದಿಕ ಧರ್ಮದ ಸಂಗಾತಿಯಾಗಿರುವದು, ಇವೆರಡೂ ಹರಿ-ಹರರ ಮುಖಾಂತರ ಪ್ರಕಟವಾಗಿರುವದೇ ಇವಕ್ಕೆ ಕಾರಣವಾಗಿರುವದು, ಹರಿ-ಹರರು ಅಭೇದರಾಗಿರುವಂತೆ ವೇದ ತಂತ್ರಗಳಲ್ಲಿ ಸಹ ಯಾವದೇ ರೀತಿ ಭೇದ ಭಾವವಿಲ್ಲವೆಂದು ತಿಳಿಯಬೇಕು' ವಾಮಸೂಕ್ತ ಪಠಣ ಮಾತ್ರದಿಂದಲೇ ವಿಷ್ಣುಪದ ಪ್ರಾಪ್ತಿರೂಪಿ ಮೋಕ್ಷವು ಪ್ರಾಪ್ತವಾಗುವದೆಂದು ಋಗ್ವಿಧಾನದಲ್ಲಿ ಹೇಳಲಾಗಿದೆ, ನಿರುಕ್ತಿಯಲ್ಲಿ ವಾಮ ಶಬ್ದಕ್ಕೆ ಪ್ರಶಸ್ಯವೆಂದು ಹೇಳಲಾಗಿರುವದು, ದುರ್ಗಾಚಾರ್ಯರು "ಯ ಏವಹಿ ಪ್ರಜ್ಞಾವಂತಸ್ತ ಏವ ಹಿ ಪ್ರಶಸ್ಯಾ ಭವಂತಿ'' ಎಂದು ಹೇಳಿದ್ದು ಪ್ರಜ್ಞಾವಾನ್ ಪ್ರಶಸ್ಯ ಯೋಗಗಳ ಹೆಸರೇ ವಾಮವೆಂದು ಹೇಳಲಾಗಿದ್ದು ಈ ಯೋಗಿಗಳ ಮಾರ್ಗದ ಹೆಸರೇ ವಾಮಮಾರ್ಗವೆಂದಿರುವದು.

ತಂತ್ರಪ್ರವರ್ತಕನಾದ ಭಗವಾನ ಶಿವನು "ವಾಮೋ ಮಾರ್ಗಃ ಪರಮಗಹನೊ ಯೋಗಿನಾಮಪ್ಯಗಮ್ಯಃ'' ಎಂದು ಹೇಳಿರುವನು, ಇದರ ಅರ್ಥವೆಂದರೆ ಇಷ್ಟೇ— ವಾಮಮಾರ್ಗವು ಅತ್ಯಂತ ಕಠಿಣವಾಗಿರುವದು, ಇದು ಯೋಗಿ ಮಾತ್ರರಿಗೇ ಅಗಮ್ಯವಾಗಿರುವದು, ಅಂದ ಬಳಿಕ ಇಂದ್ರಿಯ ಲೋಲುಪ ಜನರಿಗೆ ಇದು ಹೇಗೆ ಸಾಧಿಸಲು ಶಕ್ಯ? ಅದಕ್ಕಾಗಿಯೇ ಮಹದೇವನು— "ಲೋಲುಪೊ ನರಕಂ ವ್ರಜೇತ್" ಎಂದಿರುವನು, ವಿಷಯಾಸಕ್ತರು ನರಕಕ್ಕೆ ಹೋಗುವರೆಂಬದು ಇದರ ಅರ್ಥವಾಗಿರುವದು, ಜಿತೇಂದ್ರಿಯರಿಗಾಗಿ ಮಾತ್ರ ವಾಮಮಾರ್ಗವಿದೆ, ಜಿತೇಂದ್ರಿಯರೇ ಯೋಗಿಗಳೆಂದು ಪರಿಗಣಿಸಲ್ಪಡುವರು, ವಾಮಮಾರ್ಗವನ್ನು ಆಚರಿಸಲು ಯಾರು ಅಧಿಕಾರಿಗಳೆಂಬದನ್ನು ಈ ಕೆಳಗಿನ ಸೂತ್ರದಲ್ಲಿ ಅತ್ಯಂತ ಸ್ಪಷ್ಟವಾಗಿ ಹೇಳಲಾಗಿದೆ.

ಪರದ್ರವ್ಯೇಷು ಯೋಽಧಶ್ಚ ಪರಸ್ತ್ರೀಷು ನಪುಂಸಕಃ ।
ಪರಾಪವಾದೆ ಯೋ ಮೂಕಃ ಸರ್ವದಾ ವಿಜಿತೇಂದ್ರಿಯಃ ॥
ತಸ್ಯೈವ ಬ್ರಾಹ್ಮಣಸ್ಯಾನ್ ವಾಮಸ್ಯಾದಧಿಕಾರಿತಾ ॥

ಪರದ್ರವ್ಯ, ಪರದಾರಾ ಹಾಗೂ ಪರಾಪವಾದದಿಂದ ವಿಮುಖನಾಗ ಸಂಯಮಿಯಾದ ಬ್ರಾಹ್ಮಣನೇ ವಾಮಮಾರ್ಗಕ್ಕೆ ಅಧಿಕಾರಿ ಎಂದು ಇದ ರಿಂದ ಖಾತ್ರಿಯಾಗುವದು.

ಅಯಂ ಸರ್ವೋತ್ತಮೊ ಧರ್ಮಃ ಶಿವೋಕ್ತಃ ಸರ್ವಸಿದ್ಧಿದಃ |
ಜಿತೇಂದಿಯಸ್ಯ ಸುಲಭೊ ನಾನ್ಯಸ್ಯಾನಂತ ಜನ್ಮಭಿಃ ||

ಶಿವೋಕ್ತ ಸರ್ವಸಿದ್ಧಿಗಳನ್ನು ಕೊಡುವಂತಹ ವಾಮಮಾರ್ಗವು ಇಂದ್ರಿಯಗಳದ್ನು ತನ್ನ ವಶದಲ್ಲಿರಿಸಿಕೊಂಡಿರುವಂತಹ ಯೋಗಿಗೆ ಅತ್ಯಂತ ಸುಲಭವಾಗಿರುವದು. ಆದರೆ ವಿಷಯಾಸಕ್ತನು ಎಷ್ಟೇ ಜನ್ಮಗಳನ್ನು ತಳೆದು ಬಂದರೂ ಸಹ ಅವನಿಗೆ ವಾಮಮಾರ್ಗ ಸಾಧನೆಯು ಸುಲಭವೆನಿ ಸುವದಿಲ್ಲ.

ಇದಲ್ಲದೇ ತಂತ್ರಗಳು ಅತಿ ಗೂಢವಾಗಿರುವದರಿಂದ ಅವುಗಳಲ್ಲಿಯ ಭಾವವು ಸಹ ಬಹು ಗುಪ್ತವಾಗಿರುವದು. ಅದಕ್ಕಾಗಿ ವೇದಶಾಸ್ತ್ರ ಅಂದರೆ ತತ್ವಗಳನ್ನು ಸರಿಯಾಗಿ ಅರಿತುಕೊಂಡವನು, ಬುದ್ಧಿವಂತನೂ ಹಾಗೂ ಜಿತೇಂದ್ರಿಯನೂ ಆದ ಪುರುಷನು ಗೂಢವಾದ ತಂತ್ರಗಳ ಭಾವವನ್ನು ಶುಧಿಸಿ ತಿಳಿದುಕೊಳ್ಳುವಲ್ಲಿ ಸಮರ್ಥನಾಗಿರುವನೋ ಅವನೇ ವಾಮಮಾರ್ಗ ವನ್ನು ತಿಳಿದು, ಅಭ್ಯಸಿಸಿ ಹಾಗೂ ಆಚರಿಸಲು ತಕ್ಕ ಅಧಿಕಾರಿಯಾಗುವನು ಬೇರೆ ಯಾರಾದರೂ ಇದಕ್ಕಾಗಿ ಪ್ರಯತ್ನಿಸಿದಲ್ಲಿ ಅವರು ದುಃಖಿಗಳಾಗ ಬೇಕಾಗುವದು.

ಹೀಗೆ ತಂತ್ರ ಗ್ರಂಥಗಳಲ್ಲಿ ವಾಮಮಾರ್ಗದ ಅಧಿಕಾರಿಗಳು ಯಾರೆಂಬ ಬಗೆಗೆ ಬಹಳಷ್ಟು ವಿವರಿಸಲಾಗಿರುವದು. ಇದೆಲ್ಲದರಿಂದ ಇಂದ್ರಿಯ ಲೋಲುಪರು ವಾಮಮಾರ್ಗಕ್ಕೆ ಸರ್ವಥಾ ಅಧಿಕಾರಗಳಲ್ಲ ವೆಂದೂ ಜಿತೇಂದ್ರಿಯರು ಮಾತ್ರವೇ ಅಧಿಕಾರಿಗಳೆಂಬುದೂ ಅತ್ಯಂತ ಸ್ಪಷ್ಟ ವಾಗುವದು.

ಇನ್ನು ಪಂಚಮಕಾರಗಳ ಬಗೆಗೆ ಕೆಲಮಟ್ಟಿಗೆ ವಿಚಾರಿಸಬೇಕಾದುದು ಅವಶ್ಯವೆನಿಸುವದು. ಈ ಸಂಬಂಧದಲ್ಲಿ ಬಂದಿರುವ ವರ್ಣನೆಯು ಹೀಗೆ ಇರುವದು.

ಮದ್ಯಂ ಮಾಂಸಶ್ಚ ಮೀನಶ್ಚ ಮುದ್ರಾ ಮೈಥುನಮೇವ ಚ !
ಮಕಾರ ಪಂಚಕಂ ಪ್ರಾಹುರ್ಯೋಗಿನಾಂ ಮುಕ್ತಿದಾಯಕಂ॥

ಅಂದರೆ ಮದ್ಯ ಮಾಂಸ ಮೀನ ಮುದ್ರಾ ಹಾಗೂ ಮೈಥುನಗಳು ಈ ೫ ಆಧ್ಯಾತ್ಮಿಕಗಳು ಮಕಾರಗಳು, ಇವೇ ಯೋಗಿಗಳಿಗೆ ಮೋಕ್ಷದಾಯಕ ವಾದವುಗಳು. ಇದು ಹೇಗೆಂದು ಆಶ್ಚರ್ಯವೆನಿಸಬಹುದಾದ್ದರಿಂದ ಇದರ ನಿರೂಪಣೆಯು ಕೆಲಮಟ್ಟಿಗೆ ಅವಶ್ಯವಿರುವದು.

ಬ್ರಹ್ಮರಂಧ್ರ ಸಹಸ್ರದಲದಿಂದ ಸ್ರವಿತವಾಗುವದೇ ಸುಧೆಯು. ಕುಲ ಕುಂಡಲಿನಿ ಮುಖಾಂತರ ಯೋಗಿ ಜನರು ಇದರ ಪಾನ ಮಾಡುವರು. ಇದನ್ನೇ ಮದ್ಯಪಾನವೆಂದು ಹೇಳುವರು. ಇದರ ಹೊರತಾಗಿ ಬೇರೆಪಾನವು ಅತಿರಿಕ್ತವೆನಿಸುವದು. ಅದೇ ರೀತಿ ಬ್ರಹ್ಮರಂಧ್ರದ ಸಹಸ್ರಾರ ಕಮಲ ರೂಪಿ ಪಾತ್ರದಿಂದ ಬ್ರಹ್ಮಾಂಡವನ್ನು ತೃಪ್ತಿಗೊಳಿಸುವ ಸುಧಾ ಧಾರೆಯು ಹರಿದುಬರುವದೋ ಅದೇ ಮದಿರಾಪೇಯವೆನಿಸುವದು

ಪುಣ್ಯಾಪುಣ್ಯಪಶುಂ ಹತ್ವಾ ಜ್ಞಾನಖಡ್ಗೇನ್ ಯೋಗವಿತ್
ಪರೆಲಯಂ ನಯೇತ್ ಚಿತ್ತಂ ಮಾಂಸಾದಿ ಸ ನಿಗರ್‍ಯತೆ

ಅಂದರೆ ಪುಣ್ಯ-ಪಾಪರೂಪಿ ಪಶುವನ್ನು ಜ್ಞಾನರೂಪಿ ಖಡ್ಗದಿಂದ ಕೊಂದು ಯಾವ ಯೋಗಿಯು ತನ್ನ ಮನವನ್ನು ಬ್ರಹ್ಮನಲ್ಲಿ ಲೀನಗೊಳಿಸು ವನೋ ಅವನೇ ಮಾಂಸಾಹಾರಿ ಎಂದು ತಿಳಿಯಬೇಕು.

ಕಾಮಕ್ರೋಧ ಸುಲೋಭ ಮೋಹ ಪಶೂಕಾಂಶ್ಚಿತ್ವಾ ವಿವೇಕಾಸಿನಾ
ಮಾಂಸಂ ನಿರ್ವಿಷಮಂ ಪರಾತ್ಮ ಸುಖದಂ ಭುಂಜತಿತೇಷಾಂಬ.ಧಾ

ಅಂದರೆ ವಿವೇಕಿಗಳಾದ ಪುರುಷರು ಕಾಮ ಕ್ರೋಧ ಲೋಭ ಹಾಗೂ ಮೋಹರೂಪಿ ಪಶುಗಳನ್ನು ವಿವೇಕರೂಪಿ ಖಡ್ಗದಿಂದ ಕೊಂದು ಎರಡನೇ ಪ್ರಾಣಿಗಳಿಗೆ ಸುಖವನ್ನು ಕೊಡುವಂಥವನು ನಿರ್ವಿಷಯರೂಪಿ ಮಾಂಸ ವನ್ನು ಭಕ್ಷಿಸುವವನು ಎಂದು ತಿಳಿದುಕೊಳ್ಳಬೇಕು.

ಮನಸ್ಸು ಮೊದಲಾದ ಸರ್ವ ಇಂದ್ರಿಯಗಳನ್ನು ವಶದಲ್ಲಿರಿಸಿಕೊಂಡು ಆತ್ಮವನ್ನು ಯೋಚಿಸುವವನೇ ಮಾಂಸಾಶಿಯೆನಿಸುವನು. ಉಳಿದವರೆಲ್ಲರೂ ಜೀವಹಿಂಸಕವೆನಿಸುವರು. ಆಶೆ-ತೃಷ್ಣೆ ಮೊದಲಾದ ಅಷ್ಟ ಮುದ್ರೆಗಳನ್ನು ಬ್ರಹ್ಮರೂಪಿ ಅಗ್ನಿಯಲ್ಲಿ ಬೇಯಿಸಿ ಹವ್ಯಭಾವದ ಅನುರಾಗಿಯಾದ ಯೋಗಿಯು ಸಾವಧಾನ ಮನದಿಂದ ಭಕ್ಷಣ ಮಾಡುವನು. ಪಶುಹಿಂಸೆಯಿಂದ ವಿಮುಖನಾದಂಥ ಇಂತಹ ಮಹಾತ್ಮನು ಈ ಜಗತ್ತಿನಲ್ಲಿ ರುದ್ರನಿಗೆ ಸಮಾನನೆನಿಸುವನು.

ಯಾ ನಾಡೀ ಸೂಕ್ಷ್ಮರೂಪಾ ಗರಮಪದಗತಾ ಸೇವನಿಯಾಸುಷುಮ್ನಾ ।
ಸಾ ಕಾಂತಾಲಿಂಗನಾರ್ಹಾ ನಮನುಜರಮಣಿಸುಂದರಿ ವಾರಯೋಷಿತ್ ॥
ಕ ರ್ಯಾಚ್ಚಂದ್ರಾರ್ಕಯೋಗೆ ಯುಗಪವನಗತೆ ಮೈಥುನಂ ನೈವಯೋಸಾ ।
ಯೋಗೀಂದ್ರೊ ವಿಶ್ವವಂದ್ಯಃ ಸುಖಮಯಭವನೆ ತಾಂಪರಿಷ್ವಜ್ಯ ನಿತ್ಯಮ್ ॥

ಅಂದರೆ ಪರಮಾನಂದವನ್ನು ಕೊಡುವಂತಹ ಸೂಕ್ಷ್ಮರೂಪಾವಲಿಯೆ ಸುಷುಮ್ನಾ ನಾಡಿಯು. ಅವಳೇ ಆಲಿಂಗನಕ್ಕೆ ಯೋಗ್ಯಳಾದ ಕಾಂತೆಯಾಗಿರುವಳಲ್ಲದೇ ಮಾನವ ಸುಂದರಿ ವೇಶ್ಯೆಯು ಯೋಗ್ಯಳಲ್ಲ. ಸುಷುಮ್ನೆಯು ಸಹಸ್ರ ಚಕ್ರಾಂತರ್ಗತ ಪರಬ್ರಹ್ಮದೊಂದಿಗೆ ಸಂಯೋಗ ಹೊಂದುವದೇ ಮೈಥುನವೆಂದು ಹೇಳುವರು. ಮೈಥುನವೆಂದರೆ ಸ್ತ್ರೀ ಸಂಭೋಗನೆಂದು ತಿಳಿಯಕೂಡದು. ಈ ರೀತಿಯಾಗಿರುವವರೇ ವಿಶ್ವವಂದ್ಯಕಾರ ಯೋಗೀಂದ್ರರೆನಿಸುವರು.

ಈ ವರೆಗಿನ ವರ್ಣನೆಯಲ್ಲಿ ವಾಮಾಚಾರ ತಂತ್ರಗಳನ್ನು ನಡೆಸಲು ಯಾರು ನಿಜವಾದ ಅಧಿಕಾರಿಗಳೆಂಬದು ಸುಸ್ಪಷ್ಟವಾದಂತಾಯಿತು. ಅಂದರೆ ಉಳಿದವರು ಈ ಕರ್ಮಗಳಲ್ಲಿ ತೊಡಗಿದರೆ ಅವರಿಗೆ ಹಾನಿಯಾಗುವದು ನಿಶ್ಚಿತವೆಂಬದು ವ್ಯಕ್ತವಾದಂತಾಯಿತು.

## ಕೆಲವು ಮಂತ್ರಗಳು

### ರುದ್ರ ಮಂತ್ರ

ಓಂ ತ್ರ್ಯಂಬಕಮ್ ಯಜಾಮಹೆ ಸುಗಂಧಿ ಪುಷ್ಟಿವರ್ಧನಂ ।
ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾ ॥

ಈ ಮಂತ್ರದ ಜಪದಿಂದ ಶರೀರದ ದುರ್ಗಂಧವು ದೂರಾಗುವದಲ್ಲದೇ ಮೃತ್ಯುವಿನ ಚಿಹ್ನಗಳು ಸಹ ದೂರಾಗುವವು. ಶಿವ ಅಥವಾ ರುದ್ರನನ್ನು ಪೂಜಿಸುವದೇ ಈ ಮಂತ್ರದ ಉದ್ದೇಶವಾಗಿರುವದ . ಸಾಧಕರು ಶುಚಿರ್ಭೂತರಾಗಿ ಈ ಮಂತ್ರವನ್ನು ಜಪಿಸಬೇಕೆಂಬದನ್ನು ಲಕ್ಷದಲ್ಲಿ ಇಟ್ಟುಕೊಳ್ಳಬೇಕು.

## ರೋಗಹರ ಮಂತ್ರ

ಓಂ ಸಂ ಸಾಂ ಸಿಂಸಿಂ ಸುಂ ಸುಂ ಸೆಂ ಸೈಂ ಸೊಂ ಸೌಂ ಸಂ ಸಃ
ವಂ ವಾಂ ವಿಂ ವೀಂ ವುಂ ವೂಂ ವೆಂ ವೈಂ ವೊಂ ವಾಂ ವಂ ವಃ
ಹಂ ಸಂ ಅಮೃತವರ್ಚಸ್ ಸ್ವಾಹಾ॥

ಈ ಮಂತ್ರವು ರೋಗ ನಿವಾರಕವಾಗಿರುವದಲ್ಲದೇ ಯಾವದೇ ದುಷ್ಕರ್ಮಗಳಿಂದಾಗುವ ಹಾನಿಕಾರಕ ಪರಿಣಾಮವನ್ನು ಇದು ತಪ್ಪಿಸುವದು. ನೀರಿನ ಪಾತ್ರೆಯೊಂದನ್ನು ತೆಗೆದುಕೊಂಡು ಈ ಮಂತ್ರದಿಂದ ಆ ಜಲವನ್ನು ಅಭಿಮಂತ್ರಿಸಿ ಪ್ರತಿ ದಿನ ಪ್ರಾತಃಕಾಲ ತೆಗೆದುಕೊಳ್ಳಬೇಕು. ಈ ಮಂತ್ರವನ್ನು ೧೦೮ ಸಲ ಜಪಿಸಿದಲ್ಲಿ ಮಂತ್ರಸಿದ್ಧಿಯು ದೊರೆಯುವದು.

## ಅಪಚ್ಛಾಂತಿಮಂತ್ರ

ಓಂ ಹಂ ಹಾಂ ಹಿಂ ಹೀಂ ಹುಂ ಹೂಂ ಹೆಂ ಹೈಂ ಹೊಂ ಹೌಂ ಹಂ ಹಃ
ಕ್ಷಂ ಕ್ಷಾಂ ಕ್ಷಿಂ ಕ್ಷೀಂ ಕ್ಷುಂ ಕ್ಷೂಂ ಕ್ಷೆಂ ಕ್ಷೈ ಕ್ಷೊಂ ಕ್ಷಾಂ ಕ್ಷಂ ಕ್ಷಃ।
ಹಂ ಸಃ ಹಂ ॥

ಈ ಮಂತ್ರವು ಭೂತಪ್ರೇತ ಪಿಶಾಚಾದಿಗಳ ಶಕ್ತಿಯನ್ನು ಯಾವದೇ ದುಷ್ಟಾಚರಣೆಯಿಂದಾಗುವ ಹಾನಿಯನ್ನು ಯಾವದೇ ವಿಷದ ಪರಿಣಾಮವನ್ನು ಇದು ತಪ್ಪಿಸುವದು

## ಕ್ರೋಧ ಶಾಂತಿ ಮಂತ್ರ

ಓಂ ಶಾಂತೆ ಪ್ರಶಾಂತೆ ಸರ್ವಕ್ರೋಧೋಪ ಶಮನಿ ಸ್ವಾಹಾ ।

ಈ ಮಂತ್ರದಿಂದ ನೀರನ್ನು ಅಭಿಮಂತ್ರಿಸಿ ಯಾರಿಗೆ ಕೋಪ ಬಂದಿರು ವದೋ ಅವರ ಮುಖಕ್ಕೆ ಸಿಂಪಡಿಸಬೇಕು. ಅಂದರೆ ಸಿಟ್ಟಿಗೆದ್ದ ಮನುಷ್ಯನು ಶಾಂತನಾಗುವನೆಂದು ತಿಳಿಯಿರಿ. ಈ ಮಂತ್ರವನ್ನು ೨೧ ಸಲ ಜಪಿಸಿದಲ್ಲಿ ಮಂತ್ರದ ಸಿದ್ಧಿಯು ದೊರೆಯುವದೆಂದು ಭಾವಿಸಿರಿ.

## ಪೀಠ ಮಂತ್ರ

ನಮೊ ಭಗವತೆ ಸರ್ವ ಭೂತಾತ್ಮನೆ ವಾಸುದೇವಾಯ ಸರ್ವಾತ್ಮೆ
ಸಂಯೋಗ ಯೋಗಪದ್ಮ ಪೀಠಾತ್ಮನೆ ನಮಃ

ಸರ್ವ ಭೂತಗಳ ನಿವಾಸವು ವಾಸುದೇವನಲ್ಲಿ ಅಂದರೆ ಸರ್ವವ್ಯಾಪಕ ಪರಮಾತ್ಮನಲ್ಲಿ ಅಡಕವಾಗಿರುವದು. ಈ ಮಂತ್ರ ಪಠಣದಿಂದ ಯೋಗ ಪದ್ಮಾಸನದ ಮೇಲೆ ಕುಳಿತಂಥ ವಾಸುದೇವನ ದರ್ಶನವಾಗುವದೆಂದು ತಿಳಿಯಬೇಕು.

## ಮಂತ್ರ ರಾಜ

ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯ ಸ್ವಾಹಾ।

ಈ ಮಂತ್ರವು ಸರ್ವ ಪ್ರಕಾರದ ಭಕ್ತಿಯನ್ನು ತನ್ಮೂಲಾಂತರ ಮುಕ್ತಿಯನ್ನೂ ಕೊಡುವಂತಹದಾಗಿರುವದು.

## ಬ್ರಹ್ಮ ಮಂತ್ರ

ಓಂ ಸಚ್ಚಿದೇಕಂ ಬ್ರಹ್ಮ

ಈ ಮಂತ್ರವು ಧರ್ಮ(ಜೀವನ), ಅರ್ಥ (ಧನ), ಕಾಮ (ಸಂತತಿ), ಹಾಗೂ ಮೋಕ್ಷಗಳನ್ನು (ಮುಕ್ತಿ) ಕೊಡುವಂತಹದಾಗಿರುವದು ಇದರರ್ಥವೆಂದರೆ ಪರಮಾತ್ಮನು ಪಾಲಕ, ಸಂಹಾರಕ, ಸಿರಜನಹಾರ, ನಿತ್ಯ ಅವಿನಾಶಿಯಾಗಿರುವನು.

## ಆರಾಧನೆ ಮಂತ್ರ

ಐಂ ಸಚ್ಚಿದೇಕಂ ಬ್ರಹ್ಮ ಹ್ರಿಂ ಸಚ್ಚಿದೇಕಂ ಬ್ರಹ್ಮ
ಶ್ರೀ ಸಚ್ಚಿದೇಕಂ ಬ್ರಹ್ಮ।

ಈ ಮಂತ್ರ ಪಠಣದಿಂದ ಜ್ಞಾನ ಅಥವಾ ವಿದ್ಯೆ, ಸಮೃದ್ಧಿ, ಧನ ಅಥವಾ ಲಕ್ಷ್ಮಿಯ ಪ್ರಾಪ್ತಿಯಾಗುವದೆಂದು ತಿಳಿದುಕೊಳ್ಳಬೇಕು.

## ಗಾಯತ್ರಿ ಮಂತ್ರ

ಓಂ ಪರಮೇಶ್ವರಾಯ ವಿದ್ಮಾಹೇ ಪರತತ್ವಾಯ ಧೀಮಹಿ !
ತನ್ನೋ ಬ್ರಹ್ಮ ಪ್ರಚೋದಯಾತ್ ॥

ಈ ಮಂತ್ರವನ್ನು ೧೦೮ ಸಲ ಪಠಿಸಬೇಕು. ಹೃದಯ ಅಥವಾ ಅಂತಃಕರಣದ ಶುದ್ಧಿಗಾಗಿ ಈ ಮಂತ್ರವನ್ನು ಮೇಲೆ ಹೇಳಿದಷ್ಟು ಸಲ ಜಪಿಸಬೇಕು. ಅಂದರೆ ಹೃದಯವು ಶುದ್ಧಿಯಾಗುವದೆಂದು ತಿಳಿಯಿರಿ.

## ಸ್ವಪ್ನ ಸಾಧನೆಯು

ಓಂ ನಮೋ ಮಣಿಭದ್ರಾಚೇಟ ಕಾಮ ಸರ್ವಾರ್ಥ
ಸಿದ್ಧಿ ಕುರ್ಯಾಂ ಸ್ವಪ್ನೆ ದರ್ಶನಾಂ
ಕುರು ಕುರು ಸ್ವಾಹಾ।

ಕೆಂಪು ಕಣಗಲ ಹೂವನ್ನು ತೆಗೆದುಕೊಂಡು ಈ ಮೇಲಿನ ಮಂತ್ರದಿಂದ ೧೦೮ ಸಲ ಅದನ್ನು ಅಭಿಮಂತ್ರಿಸಬೇಕು, ರಾತ್ರಿ ಮಲಗುವಾಗ ತಲೆಗಿಂಬಿನ ಬುಡದಲ್ಲಿ ಇಟ್ಟುಕೊಂಡು ಮಲಗಿಕೊಳ್ಳಬೇಕು ಇದೇ ರೀತಿ ಬಿಟ್ಟೂ ಬಿಡದೇ ೭ ದಿನಗಳ ವರೆಗೆ ಮಾಡಬೇಕು. ನೀವು ಯಾವುದರ ಆದೇಶಕ್ಕಾಗಿ ದಾರಿ ಕಾಯುತ್ತಿರುವಿರೋ ಅದು ಸಾಧಿಸುವದೋ ಇಲ್ಲವೋ ಎಂಬದು ಸ್ವಪ್ನದ ಮುಖಾಂತರ ನಿಮಗೆ ತಿಳಿದು ಬರುವದು.

## ಲಾಭ ಸಾಧನೆಯು

ಓಂ ನಮೋ ಭಗವತಿ ಕ್ರುದ್ಧ್ಯ ಪದ್ಮಾವತಿ
ಓಂ ಹ್ರೀಂ ಪೂರ್ವಾಯ ದಕ್ಷಿಣಾಯ
ಪಶ್ಚಿಮಾಯ ಉತ್ತರಾಯ ಪೂರ್ವಸ್ಯ ಸರ್ವ ಜನಂ
ವಶ್ಯಂ ಕುರು ಕುರು ಸ್ವಾಹಾ |

ರಾತ್ರಿ ಮಲಗುವಾಗಿನಿಂದ ಹಿಡಿದು ಮುಂಜಾನೆ ಎದ್ದ ಕೆಲಹೊತ್ತಿನ ನಂತರ ಯಾರೊಂದಿಗೂ ಒಂದು ಶಬ್ದವನ್ನು ಸಹ ಮಾತಾಡಬಾರದು ಹಾಗೆಯೇ ಈ ಮೇಲಿನ ಮಂತ್ರದಿಂದ ೧೦೫ ಸಲ ಜಪ ಮಾಡಬೇಕು. ನಂತರ ಮಂತ್ರವನ್ನು ಪಠಿಸುತ್ತ ಪ್ರತಿಯೊಂದು ದಿಕ್ಕಿನ ಕಡೆಗೆ ಮುಖಮಾಡಿ ಕೊಂಡು ನಿಂತು ಥೂಂಕರಿಸಬೇಕು. ಅಂದರೆ ನೀವು ಯಾವದೇ ದಿಕ್ಕಿನಲ್ಲಿ ಸಾಗಿದರೂ ನಿಮಗೆ ಲಾಭವು ಅನಾಯಾಸವಾಗಿ ದೊರೆಯುವದೆಂಬದರಲ್ಲಿ ಯಾವದೇ ರೀತಿ ಸಂದೇಹಕ್ಕಾಸ್ಪದವೂ ಇಲ್ಲ.

## ಗಣೇಶ ಮಂತ್ರ

(೧) ಓಂ ಅಂತರಿಕ್ಷಾಯ ಸ್ವಾಹಾ |
(೨) ಓಂ ಹ್ರೀಂ ಪೂರ್ಣದಯಾ ಓಂ ಹ್ರೀಂ ಫಟ್ ಸ್ವಾಹಾ |

ಪ್ರಾರಂಭದಲ್ಲಿ ಈ ಮೊದಲಿನ ಮಂತ್ರದಿಂದ ಗಣೇಶನ ಪೂಜೆಯನ್ನು ಮಾಡಬೇಕು. ತದನಂತರ ಎರಡನೇ ಮಂತ್ರವನ್ನು ಪಠಿಸುತ್ತ ಕೆಂಪು ಚಂದನ, ಕೆಂಪು ಕಣಗಲ ಹೂವು, ತುಪ್ಪ, ಜೇನುತುಪ್ಪ ಇವುಗಳ ಹವನ ಮಾಡಬೇಕು. ಅಂದರೆ ಗಣೇಶನು ನಿಮ್ಮ ಮೇಲೆ ಸುಪ್ರೀತನಾಗುವನು. ಆಗ ಶ್ರೀ ಗಣೇಶನಿಂದ ನಿಮಗೆ ಯಾವ ಇಚ್ಛೆ, ಕಾರ್ಯ ನೆರವೇರಬೇಕಾಗಿ ದೆಯೋ ಅದು ಬಹು ಸುಲಭವಾಗಿ ನೆರವೇರುವದೆಂದು ತಿಳಿದುಕೊಳ್ಳಬೇಕು. ಆದರೆ ಗಣೇಶನ ಪೂಜೆಯನ್ನು ನೀವು ತುಂಬಾ ಭಕ್ತಿಪೂರ್ವಕವಾಗಿ ಮಾಡ ಬೇಕೆಂಬಹನ್ನು ಲಕ್ಷಿಸಬೇಕು.

## ಕವಿ ಆಗುವದು

ಈ ಸಾಧನೆಯ ಮಂತ್ರವು ಈ ರೀತಿಯಾಗಿರುವದು :—

ಓಂ ಮಹೇಶ್ವರಾಯ ನಮಃ

ದಿನಾಲು ಅರ್ಧ ತೊಲೆ ವೆಖಂಡವನ್ನು ತೆಗೆದುಕೊಂಡು ಅರ್ಧ ಸೇರು ಆಕಳ ಹಾಲಿನಲ್ಲಿ ಚೆನ್ನಾಗಿ ಬೆರಸಬೇಕು ಅದರ ಮಧುರವಾದ ಖೀರನ್ನು ಸೇವಿಸಬೇಕು, ಜೊತೆಗೆ ಮೇಲಿನ ಮಂತ್ರವನ್ನು ಜಪಿಸುತ್ತ ಹೋಗಬೇಕು ಈ ರೀತಿ ಹಲವಾರು ದಿನಗಳ ವರೆಗೆ ತಪ್ಪದೇ ಮಾಡುತ್ತ ಹೋಗಬೇಕು. ಇದರಿಂದ ಸಾಧಕನಲ್ಲಿ ಕಾವ್ಯ ಶಕ್ತಿಯು ತಂತಾನೇ ಉತ್ಪನ್ನವಾಗುವದಲ್ಲದೆ ಅವನು ಕವಿತೆಗಳನ್ನು ರಚಿಸತೊಡಗುವನೆಂದು ತಿಳಿದುಕೊಳ್ಳಬೇಕು.

## ಅನ್ನಪೂರ್ಣಳನ್ನು ಪ್ರಸನ್ನೀಕರಿಸಿಗೊಳ್ಳುವದು

ಆರಿದ್ರಾ ನಕ್ಷತ್ರದ ಸಮಯದಲ್ಲಿ ಔದುಂಬರ ಗಿಡದ ಬೇರನ್ನು ತೆಗೆದುಕೊಂಡು ಬರಬೇಕು ಅದನ್ನು ಯಾವದಾದರೂ ದೊಡ್ಡ ಗಿಡದ ನೆರಳಲ್ಲಿ ಇಟ್ಟು ಚೆನ್ನಾಗಿ ಒಣಗಿಸಬೇಕು. ನಂತರ ಅದನ್ನು ಅಭಿಮಂತ್ರಿಸಿ ಯಾವದಾದರೊಂದು ಕೋಣೆಯಲ್ಲಿರಿಸಬೇಕು. ನೀವು ಯಾವ ಕೋಣೆಯಲ್ಲಿ ಈ ಒಣಬೇರನ್ನು ಇರಿಸಿರುವರೋ ಅಲ್ಲಿರಿಸಿರುವ ದವಸ ಧಾನ್ಯಗಳು ಎಂದೂ ಕಡಿಮೆಯಾಗದೇ ಉಳಿಯುವವು. ಅಂದರೆ ಸದಾ ಕಾಲ ಇದ್ದಷ್ಟೇ ಉಳಿಯುವದರಲ್ಲಿ ಬರುವವೆಂದು ತಿಳಿದುಕೊಳ್ಳಬೇಕು.

ಅನ್ನಪೂರ್ಣಳನ್ನು ಪ್ರಸನ್ನೀಕರಿಸಿಕೊಳ್ಳುವ ಇನ್ನೊಂದು ವಿಧಾನವೂ ಇರುವದು. ಅದೆಂದರೆ, ಭಾದ್ರಪದ ಮಾಸದ ಕೃಷ್ಣಪಕ್ಷದ ಕಾಲದಲ್ಲಿ ಭರಣಿ ನಕ್ಷತ್ರವೇ ಇರುವಂತಹ ಯೋಗವೊಂದನ್ನು ಕಂಡು ಹಿಡಿಯಬೇಕು. ಅಂದು ೪ ಕಲಶಗಳನ್ನು ತೆಗೆದುಕೊಂಡು ಬರಬೇಕು, ಅವನ್ನು ನೀರಿನಿಂದ ತುಂಬಬೇಕು, ಮನೆಯಲ್ಲಿಯ ಒಂದು ಮೂಲೆಯನ್ನು ಆರಿಸಿ ಅಲ್ಲಿ ಅವನ್ನು ಇರಿಸಬೇಕು, ಅವನ್ನು ವಿಧ್ಯುಕ್ತವಾದ ರೀತಿಯಲ್ಲಿ ಪೂಜಿಸಬೇಕು, ಎರಡನೇ

ದಿವಸ ಅವನ್ನು ಏನಾಗಿದೆ ಎಂಬ ಬಗ್ಗೆ ನೋಡಬೇಕು, ಅವು ಸಂಪೂರ್ಣ ಹಾಗಿ ಬರಿದು ಆಗಿದ್ದಲ್ಲಿ ನಿಮಗೆ ಲಾಭವಾಗುವದೆಂದು ತಿಳಿದುಕೊಳ್ಳಬೇಕು ಒಂದು ವೇಳೆ ಅವು ಹಾಗೆಯೇ ಇದ್ದಲ್ಲಿ ನೀರನ್ನು ತೆಗೆದು ಹಾಕಿ ಸ್ವಲ್ಪಸ್ವಲ್ಪ ಧಾನ್ಯವನ್ನು ಹಾಕಬೇಕು. ಮತ್ತು ಪೂರ್ಣ ತುಂಬಬೇಕು. ಅಲ್ಲದೇ ಮತ್ತೆ ಅವನ್ನು ಪೂಜಿಸಬೇಕು, ಮರುದಿನ ಮತ್ತೆ ಅವನ್ನು ತೆಗೆದು ನೋಡಬೇಕು, ಆ ಕಲಶಗಳಲ್ಲಿಯ ಧಾನ್ಯವು ಹಾಗೇ ತುಂಬಿ ಉಳಿದಿದ್ದರೆ ಅನ್ನಪೂರ್ಣಳು ಪ್ರಸನ್ನಳಾಗಿರುವಳೆಂದು ತಿಳಿದುಕೊಳ್ಳತಕ್ಕದ್ದು, ಹೀಗೇ ನಿಮ್ಮಲ್ಲಿ ಮುಂದೆ ಧನ ಧಾನ್ಯ ಸಮೃದ್ಧವಾಗಿ ಉಳಿಯುವದೆಂದು ತಿಳಿಯಬೇಕು.

## ಸಿದ್ಧಿ ಚೂರ್ಣ

ಸಾಸ್ವಿ, ಮುಳ್ಳಿನತುದಿ, ಧತ್ತೂರಿಯ ಬೇರುಗಳನ್ನು ತಂದು ದೊಡ್ಡ ಗಿಡದ ನೆರಳಲ್ಲಿ ಅವನ್ನು ಚೆನ್ನಾಗಿ ಒಣಗಿಸಬೇಕು, ಅವುಗಳ ಚೂರ್ಣವನ್ನು ಸಿದ್ಧಪಡಿಸಬೇಕು, ನೀವು ಈ ಚೂರ್ಣವನ್ನು ಯಾರ ತಲೆಯ ಮೇಲೆ ಹಾಕುವಿರೋ ಅವರಿಗೆ ನಿಮ್ಮದೇ ಗುಂಗು ಹಿಡಿಯುವದಲ್ಲದೇ ನೀವು ಹೇಳಿದ ಸಾಮಾನನ್ನು ನಿಮಗೆ ತಂದು ಕೊಡುವರು.

## ಯೋಗಿನಿ ಸಾಧನೆಯು

ಈ ಸಾಧನೆಯ ಮಂತ್ರವು ಈ ರೀತಿಯಾಗಿರುವದು :—
ಓಂ ನಮೋ ಮಹಾಕಾಲಿ ಯೋಗಿನಿ ಶಂಖಿನಿ
ಸಾಧಯ ಸಾಧಯ ಗ್ರಿಂ ಗ್ರಿಂ
ಹೂಂ ಫಟ್ ಸ್ವಾಹಾ ।

ಮೊದಲು ಸ್ನಾನಾದಿಗಳನ್ನು ತೀರಿಸಿಕೊಂಡು ಶುದ್ಧರಾಗಬೇಕು, ಧೂಪದೀಪಾದಿಗಳನ್ನು ಹಾಕಬೇಕು, ಗುಗ್ಗಳವನ್ನು ಉಪಯೋಗಿಸಬೇಕು, ಈ ಗುಗ್ಗಳವನ್ನು ಮೇಲಿನ ಮಂತ್ರದಿಂದ ಅಭಿಮಂತ್ರಿಸಿ ಬೆಂಕಿಯಲ್ಲಿ ಹಾಕಬೇಕು, ೧೦೦೮ ಸಲ ಈ ಮಂತ್ರದ ಜಪವನ್ನು ಮಾಡಬೇಕು, ೨೧ ದಿನಗಳ ವರೆಗೆ ಈ ರೀತಿಯಾಗಿ ಪ್ರಯೋಗವನ್ನು ಮಾಡಬೇಕು, ಅದರಿಂದ ಯೋಗಿನಿ

ಸಾಧನೆಯು ಪೂರ್ಣವಾಗುವದಲ್ಲದೇ ಯೋಗಿನಿಯು ನಿಮಗೆ ಪ್ರತ್ಯಕ್ಷಳಾಗಿ ನೀವು ಬೇಡಿದಂತಹ ಯಾವದೇ ವರವನ್ನು ನಿಮಗೆ ದಯಪಾಲಿಸುವಳೆಂದು ತಿಳಿದುಕೊಳ್ಳಬೇಕು.

## ಸರಸ್ವತಿಯನ್ನು ಪ್ರಸನ್ನೀಕರಿಸುವ ಮಂತ್ರ

ಓಂ ನಮೋ ಭಗವತಿ ಪರಮೇಶ್ವರಿ ವಾಗ್ವಾಹಿನಿ
ಮಮ ವಿದ್ಯಾಂ ದೇಹಿ ಭಗವತಿ ಹಂಸವಾಹಿನಿ ಸಮಾರೂಢಾ
ಬುದ್ಧಿ ದೇಹಿ ಬುದ್ಧಿ ದೇಹಿ ಪ್ರಜ್ಞಾ ದೇಹಿ ಪ್ರಜ್ಞಾ ದೇಹಿ
ವಿದ್ಯಾ ದೇಹಿ ವಿದ್ಯಾ ದೇಹಿ ಪರಮೇಶ್ವರಿ ಸರಸ್ವತಿ ಸ್ವಾಹಾ॥

ಶನಿವಾರ ದಿವಸದಂದು ಈ ಮಂತ್ರದ ಜಪವನ್ನು ಪ್ರಾರಂಭಿಸಬೇಕು. ಪ್ರತಿ ದಿವಸ ೧೦೮ ಸಲ ಈ ಮಂತ್ರವನ್ನು ಜಪಿಸಬೇಕು. ಈ ರೀತಿ ೨೧ ದಿನಗಳ ವರೆಗೆ ಸಾಧನೆಯನ್ನು ಮಾಡುತ್ತ ಹೋಗಲಾಗಿ ಸರಸ್ವತಿಯು ನಿಮ್ಮ ಮೇಲೆ ಪ್ರಸನ್ನಳಾಗುವಳೆಂದು ತಿಳಿಯಬೇಕು.

## ಕುಬೇರ ಭಾಂಡಾರ ಸಾಧನೆಯು

ಈ ಸಾಧನೆಯನ್ನು ಅತ್ಯಂತ ಗುಪ್ತ ರೀತಿಯಲ್ಲಿ ನಡೆಸಬೇಕು ಈ ಸಾಧನೆಗಾಗಿ ಊರಿಂದ ಬಹು ದೂರ ಇರುವಂತಹ ಸ್ಥಳವನ್ನು ಆರಿಸಿಕೊಳ್ಳಬೇಕು. ಆ ಸ್ಥಳವು ಸಹ ಗುಪ್ತವಾಗಿರಬೇಕು. ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಯಲ್ಲಿಯೂ ಇಂತಹ ಅನೇಕ ಗುಪ್ತ ಸ್ಥಳಗಳು ಇದ್ದೇ ಇರುತ್ತವೆ. ಹೋಳಿ ದಿವಸದಂದು ಎಣ್ಣೆ, ತುಪ್ಪ, ಗೋದಿ, ಬೆಲ್ಲ ಹಾಗೂ ಜೋಳಗಳನ್ನು ಮತ್ತ ೧ ದುಡ್ಡನ್ನು ೧ ಗಂಟಿನಲ್ಲಿ ಕಟ್ಟಿ ಮೇಲೆ ತಿಳಿಸಿದಂತಹ ಗುಪ್ತ ಸ್ಥಳದಲ್ಲಿ ಇರಿಸಿ ಬರಬೇಕು. ಮರುದಿನ ಹೋಗಿ ಅದನ್ನು ತೆಗೆದುಕೊಂಡು ಬರಬೇಕು. ಈ ಗಂಟನ್ನು ನೀವು ಆಹಾರ ಧಾನ್ಯಗಳನ್ನು ಇಡುವಂತಹ ಕೋಠಿಕೋಲಿಯಲ್ಲಿ ಇಡಬೇಕು. ಅಂದರೆ ಧನಧಾನ್ಯಾದಿಗಳು ಯಾವದೇ ಕಾಲಕ್ಕೆ ಕಡಿಮೆ ಬೀಳುವದಿಲ್ಲವೆಂದೂ ನಿಮಗೆ ಯಾವದೇ ರೀತಿಯಿಂದ ತೊಂದರೆಯಾಗುವದಿಲ್ಲವೆಂದೂ ತಿಳಿದುಕೊಳ್ಳಬೇಕು.

## ಧ್ಯಾನ ಮಂತ್ರ ಮತ್ತು ಯಂತ್ರ

ಯೋನಿಮಾತ್ರ ಶರೀರಾಯಾಂ ಕುಂಗುವಾಪಿನಿ ಕಾಮದಾ
ರಜಸ್ವಲಾ ಮಹಾತೇಜಾ ಧ್ಯೇಯಾ ಕಾಮಾಕ್ಷಿ ಸರ್ವದಾ॥

ಈ ಮೇಲಿನ ಮಂತ್ರವನ್ನು ೧೦೦೦ ಸಲ ಜಪಿಸಬೇಕು. ಗುಗ್ಗುಳ ಹಾಗೂ ಸಂಕೇಶ್ವರ ಹೂಗಳ ೭೦೦ ಸಲ ಆಹುತಿಯನ್ನು ಕೊಡಬೇಕು ಮಾಯಫಳದ ಚೂರ್ಣವನ್ನು ತೆಗೆದುಕೊಂಡು ಅದನ್ನು ಒಂದು ಬಟ್ಟೆಯಲ್ಲಿ ಹಾಕಿ ಸುತ್ತಿ ಅದರದೊಂದು ದೀಪವನ್ನು ಸಿದ್ಧಪಡಿಸಿ ದೀಪ ಹೊತ್ತಿಸಬೇಕು. ಆ ದೀಪದ ಪೂಜೆಯನ್ನು ಮಾಡಬೇಕು. ೮-೧೦ ವರ್ಷಗಳ ಬಾಲಕ ಇಲ್ಲವೇ ಬಾಲಕಿಯನ್ನು ಹುಡುಕಿಕೊಂಡು ಬರಬೇಕು. ಅವನು (ಅವಳು) ಶ್ವೇತವರ್ಣದವನೂ, ಪವಿತ್ರನೂ ಇರಬೇಕಾದುದು ಅತ್ಯವಶ್ಯ ಅವನು ದೇವಗಣದವನಾಗಿರಬೇಕು. ಅವನನ್ನು ದೀಪದ ಮುಂದೆ ಕೂಡಿಸಬೇಕು. ಮಾಯಫಳವೊಂದನ್ನು ಎದುರಿಗೆ ಇಡಬೇಕು. ಕೈಯಲ್ಲಿ ನೀರು ತೆಗೆದ ಕೊಂಡು ಅದನ್ನು ಮೇಲಿನ ಮಂತ್ರದಿಂದ ಅಭಿಮಂತ್ರಿಸಿ ಮಾಯಫಳದ ಮೇಲೆ ನೀರು ಬಿಡಬೇಕು.

| | | | |
|---|---|---|---|
| ೧ | ೮ | ೩ | ೮ |
| ೫ | ೬ | ೩ | ೬ |
| ೭ | ೨ | ೯ | ೨ |
| ೭ | ೪ | ೫ | ೪ |

ತದನಂತರ ಬಾಜುವಿಗೆ ಬರೆದ ಯಂತ್ರವನ್ನು ಕಾಗದದ ಮೇಲೆ ಬರೆದು ದೀಪದ ಹತ್ತಿರ ಇರಿಸಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು ಮಾಯಫಳದ ಭಸ್ಮವನ್ನು ಎಣ್ಣೆಯಲ್ಲಿ ಸೇರಿಸಿ ಆ ಬಾಲಕನ ಕೈಗೆ ಅದನ್ನು ಲೇಪಿಸಬೇಕು. ಅದು ಒಣಗುವಂತೆಮಾಡಬೇಕು. ನಂತರ ಬಾಲಕನಕೈಯಲ್ಲಿ ಈ ಯಂತ್ರವನ್ನು ಇರಿಸಬೇಕು. ಮುಂದೆ ಅದನ್ನು ಆ ಬಾಲಕನ ಕೊರಳಲ್ಲಿ ಇಲ್ಲವೇ ಭುಜಕ್ಕೆ ಕಟ್ಟಬೇಕು.

ಈ ಬಗೆಯಲ್ಲಿ ಮಂತ್ರ ಹಾಗೂ ಯಂತ್ರದ ಸಿದ್ದಿಯು ದೊರೆತ ನಂತರ ಆ ಬಾಲಕನಿಗೆ ಸಿದ್ಧ ದೃಷ್ಟಿಯು ಪ್ರಾಪ್ತವಾಗುವದೆಂದು ತಿಳಿಯಬೇಕು. ತದನಂತರ ಅವನಿಗೆ ಕೆಳಗೆ ಅಂಗೈಯ ಕಡೆಗೇ ದೃಷ್ಟಿಯನ್ನು ಸಿದ್ಧವಾಗಿರಿಸಲು ತಿಳಿಸಬೇಕು. ಮುಂದೆ ನೀವು ಅವನಿಗೆ ಕೇಳಬೇಕಾದ ಪ್ರಶ್ನೆಯನ್ನು ಕೇಳಬೇಕು. ಆ ಪ್ರಶ್ನೆಗೆ ಬಾಲಕನು ಯಾವ ಉತ್ತರವನ್ನು ಕೊಡುವನೊ ಅದೇ ಈ ಸಾಧನೆಗೆ ಕೊನೆ ಎಂದು ತಿಳಿಯಬೇಕು. ಈ ರೀತಿ ಸಾಧನೆಯು ಮುಗಿದ ನಂತರ ಅನ್ನ ದಾನವನ್ನು ಮಾಡಬೇಕು. ಇದು ಬಹಳಸೂಕ್ಷ್ಮವಾದ ಸಿದ್ದಿಯಾಗಿರುವದರಿಂದ ಮತ್ತು ಸಣ್ಣ ಹುಡುಗರಿಂದ ಈ ಕಾರ್ಯವಾಗಬೇಕಾಗಿರುವದರಿಂದ ಬಹಳೇ ಲಕ್ಷಪೂರ್ವಕವಾಗಿ ಈ ಸಾಧನವನ್ನು ಕೈಕೊಳ್ಳಬೇಕೆಂಬದನ್ನು ಮರೆಯಬಾರದು. ಹುಡುಗರು ಹೆದರದಂತೆ ದಿಟ್ಟರನ್ನೇ ಆರಿಸಿಕೊಳ್ಳುವದೇ ಉತ್ತಮ. ಇಲ್ಲವಾದರೆ ಸಾಧನೆಯಲ್ಲಿ ಇಲ್ಲದ ತೊಂದರೆ ಉಂಟಾಗಬಹುದಾಗಿರುವದು.

## ಇಪ್ಪತ್ತೊಂದರ ಯಂತ್ರ

| | | | |
|---|---|---|---|
| ೪ | ೫ | ೫ | ೯ |
| ೮ | ೪ | ೮ | ೯ |
| ೬ | ೩ | ೬ | ೬ |
| ೩ | ೯ | ೨ | ೭ |

ಭೋಜಪತ್ರದ ಮೇಲೆ ಗಂಗಾನದಿಯ ತೀರ್ಥದಿಂದ ಈ ಯಂತ್ರವನ್ನು ಬರೆಯಬೇಕು. ನಂತರ ೨೧ ದಿನಗಳ ವರೆಗೆ ಗಂಗಾಜಲದಿಂದ ಈ ಯಂತ್ರವನ್ನು ಪೂಜೆ ಪುನಸ್ಕಾರಗಳ ನಂತರ ಪ್ರೋಕ್ಷಿಸಬೇಕು. ಈ ಪ್ರೋಕ್ಷಿತ ನೀರಿನ ತೀರ್ಥವನ್ನು ಗರ್ಭವತಿಯಾದ ಸ್ತ್ರೀಗೆ ಕೊಡಬೇಕು. ಅಂದರೆ ಆ ಗರ್ಭವತಿ ಸ್ತ್ರೀಗೆ ಪ್ರಸವ ಕಾಲದಲ್ಲಿ ಯಾವದೇ ರೀತಿಯಿಂದ ತ್ರಾಸ ಇಲ್ಲವೇ ಕಷ್ಟವಾಗುವದಿಲ್ಲ. ಬಹು ಸುಲಭವಾಗಿ ಪ್ರಸೂತವಾಗುವದೆಂದು ತಿಳಿಯಿರಿ.

## ಮೂವತ್ನಾಲ್ಕರ ಯಂತ್ರ

| | | | |
|---|---|---|---|
| ೧೧ | ೮ | ೧ | ೧೪ |
| ೨ | ೧೩ | ೧೨ | ೭ |
| ೧೬ | ೩ | ೬ | ೯ |
| ೫ | ೧೦ | ೧೫ | ೪ |

ಅತ್ಯಂತ ಶುಭ್ರವಾದ ವಸ್ತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು. ಅದರ ದೀಪದ ಬತ್ತಿಯನ್ನು ಸಿದ್ಧಪಡಿಸಬೇಕು. ಅದರಿಂದ ಪ್ರಣತಿಯಲ್ಲಿ ದೀಪವನ್ನು ಹಚ್ಚಬೇಕು. ಆ ಪಣತಿಯಜ್ಯೋತಿಯನ್ನು ನೀವು ಇಚ್ಛಿಸಿದ ಪ್ರೇಯಸಿಯ ಮನೆಯ ದಿಕ್ಕಿಗೆ ಮಾಡಿಇಡಲಾಗಿ ಆ ಪ್ರೇಯಸಿಯು ನಿಮ್ಮ ಬಳಿಗೆ ಆಕರ್ಷಿತಳಾಗಿ ಬರುವಳು. ನಿಮ್ಮ ಬಗೆಗೆ ಅವಳಲ್ಲಿ ಸಂಪೂರ್ಣ ಅಂತಃಕರುಣ ಉಂಟಾಗುವದೆಂದು ತಿಳಿಯಬೇಕು.

## ನ್ಯಾಯಾಲಯದಲ್ಲಿ ಯಶ ದೊರಕಿಸಿಕೊಡುವ ಯಂತ್ರ

| | | |
|---|---|---|
| ಕ್ರೀಂ | ಕಂ | ಕ್ರೀಂ |
| ಆ | ೨೨ | ರ್ಷ |
| ಕ್ರೀಂ | ಯ | ಕ್ರೀಂ |

ರವಿವಾರ ದಿವಸ ಈ ಯಂತ್ರವನ್ನು ಕಮಲದ ಪತ್ರದ ಮೇಲೆ ಹಂಸಪೀಸ ಲೇಖನಿಯನ್ನು ಮಾಡಿಕೊಂಡು ಶಿವಕಾಂತಿಯ ರಸದಿಂದ ಬರೆಯಬೇಕು. ವಿಧಿಪೂರ್ವಕವಾಗಿ ಅದರ ಪೂಜೆಯನ್ನು ಮಾಡಬೇಕು. ನಂತರ ಅದನ್ನು ಭುಜಕ್ಕೆ ಕಟ್ಟಿಕೊಂಡು ಕೋರ್ಟು ಕಚೇರಿಗಳಿಗೆ ಹೋಗಬೇಕು. ಅದರಿಂದ ನ್ಯಾಯಾಧೀಶನು ನಿಮ್ಮ ಬಗೆಗೆ ಆಕರ್ಷಿತನಾಗುವನು. ಅಂದರೆ ನಿಮಗೆ ಅಲ್ಲಿ ಖಾತ್ರಿಯಿಂದ ಯಶವು ದೊರೆಯುವದು. ಇದಲ್ಲದೇ ನೀವು ಆಕರ್ಷಿಸ

ಬೇಕೆಂದು ಇಚ್ಛಿಸಿದ ವ್ಯಕ್ತಿಯು ಹೆಸರನ್ನು ಬರೆದು ಅದನ್ನು ವಿಧಿವತ್ತಾಗಿ ಪೂಜಿಸಬೇಕು ತದನಂತರ ಅದನ್ನು ಬಂಗಾರದ ತಾಯಿತವನ್ನುಮಾಡಿಸಿ ಅದರಲ್ಲಿ ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು. ಅಂದರೆ ನೀವು ಇಚ್ಛಿಸಿದ ವ್ಯಕ್ತಿಯು ನಿಮಗೆ ಆಕರ್ಷಿತನಾಗಿ ಬರುವನೆಂಬುದರಲ್ಲಿ ಯಾವದೇಸಂದೇಹ ವಿಲ್ಲವೆಂದು ತಿಳಿದುಕೊಳ್ಳಬೇಕು-

## ಪುತ್ರದಾಯಕ ಯಂತ್ರ




ರೋಹಿಣಿ ನಕ್ಷತ್ರವಿರುವ ಕಾಲಕ್ಕೆ ಈ ಯಂತ್ರವನ್ನು ಬರೆಯಬೇಕು, ಪುತ್ರವತಿ ಸ್ತ್ರೀಯ ಮೊಲೆ ಹಾಲು ಚಂದನ ಹಾಗೂ ಕೇಶಗಳಮಿಶ್ರಣ ಮಾಡಿ ಈ ಯಂತ್ರ ಬರೆಯುವ ಮಸಿಯನ್ನಾಗಿ ಮಾಡಿಕೊಳ್ಳಬೇಕು ಡಾಳಿಂಬಿಗಿಡದ ಟೊಂಗೆಯನ್ನು ಲೇಖನಿಯಾಗಿ ಮಾಡಿಕೊಂಡು ಮೇಲಿನ ಮಿಶ್ರಣದಿಂದ ಬಿಳಿಯ ಕಾಗದದ ಮೇಲೆ ಎಂಟು ಸಲ ಈ ಯಂತ್ರವನ್ನು ತಾಮ್ರದ ತಾಯಿತ ದಲ್ಲಿ ಹಾಕಿ ಸ್ತ್ರೀಯ ಕೊರಳಿಗೆ ಕಟ್ಟಬೇಕು. ಉಳಿದ ೭ ಯಂತ್ರಗಳಲ್ಲಿ ದಿನಾಲು ಒಂದೊಂದನ್ನು ಹಾಲು ಇಲ್ಲವೇ ನೀರಿನಲ್ಲಿ ಹಾಕಿ ಅದರ ತೀರ್ಥ ವನ್ನು ತೆಗೆದುಕೊಳ್ಳುತ್ತ ಹೋಗಬೇಕು. ಅಂದರೆ ಆ ಸ್ತ್ರೀಯು ಪುತ್ರವತಿ ಯಾಗುವದು ಅತ್ಯಂತ ಖಾತ್ರಿ ಎಂದು ತಿಳಿದುಕೊಳ್ಳಬೇಕು· ಇದರಲ್ಲಿ ಯಾವ ಸಂದೇಹವೂ ಇಲ್ಲ.

## ಚಳಿಬಾಧೆ ನಿವಾರಣ ಯಂತ್ರ

| | | | |
|---|---|---|---|
| ೭ | ೪೪ | ೯ | ೫೧ |
| ೭೪ | ೮ | ೪ | ೫೨ |
| ೩ | ೨೯ | ೮೧ | ೯೧ |
| ೯ | ೬ | ೩೯ | ೪೫ |

ಈ ಯಂತ್ರವನ್ನು ಬಿಳಿಯ ಕಾಗದದ ಮೇಲೆ ಕೆಂಪು ಚಂದನದಿಂದ ಬರೆಯುಬೇಕು. ಅದನ್ನು ವಿಧಿವತ್ತಾಗಿ ಪೂಜಿಸಬೇಕು. ಯಾವ ಬಾಲಕನಿಗೆ ಚಳಿಯು ಬಾಧೆಯಾಗಿರುವದೋ ಅವನ ಕೊರಳಲ್ಲಿ ಇದನ್ನು ಕಟ್ಟಬೇಕು. ಅಂದರೆ ಅವನಲ್ಲಿಯ ಚಳಿಬಾಧೆಯು ನಿವಾರಣೆಯಾಗಿ ಅವನು ಗುಣಮುಖನಾಗುವನೆಂದೂ ಇದರಲ್ಲಿ ಯಾವ ಸಂದೇಹವೂ ಇಲ್ಲ.

ಕಾಗದದ ಮೇಲೆ ಈ ಯಂತ್ರವನ್ನು ಚಂದನದಿಂದ ಬರೆದು ಗುಗ್ಗುಳದ ಧೂಪವನ್ನು ಹಾಕಬೇಕು. ಪೂಜೆ ಪುನಸ್ಕಾರಾದಿಗಳನ್ನು ನಡೆಸಬೇಕು. ಯಾರಿಗೆ ಶೀತ ಬಾಧೆಯಾಗಿರುವದೋ ಅವರ ಕೊರಳಿಗೆ ಕಟ್ಟಬೇಕು. ತಾಯಿತದಲ್ಲಿ ಹಾಕಿ ಕಟ್ಟಿಕೊಳ್ಳಬೇಕೆಂಬದನ್ನು ಲಕ್ಷದಲ್ಲಿರಿಸಬೇಕು ಅಂದರೆ ಶೀತ ಬಾಧೆಯು ತ್ವರಿತದಲ್ಲಿಯೇ ನಿವಾರಣೆ ಹೊಂದಿ ಅವನು ಗುಣಮುಖನಾಗುವನೆಂದು ತಿಳಿಯಬೇಕು.

## ಕಷ್ಟ ನಿವಾರಣ ಯಂತ್ರ

| | | | |
|---|---|---|---|
| ೩೮ | ೫೭ | ೧ | ೮ |
| ೫ | ೯ | ೬೨ | ೨೧ |
| ೮೭ | ೨೪ | ೧ | ೮ |
| ೮ | ೧ | ೮೩ | ೭೧ |

ಕೆಂಪುಕಾಗದದ ಮೇಲೆ ಈಯಂತ್ರವನ್ನು ಗುಲಾಬಿ ರಸದಿಂದ ಬರೆಯಬೇಕು, ಗುಗ್ಗಳದ ಧೂಪ ಹಾಕಿ ದೀಪಾದಿಗಳಿಂದ ಪೂಜಿಸಿ ಅರ್ಚಿಸಬೇಕು, ನಂತರ ಇದನ್ನು ಗರ್ಭವತಿ ಸ್ತ್ರೀಯರಿಗೆ ತೋರಿಸಲಾಗಿ ಪ್ರಸೂತಿ ಕಾಲದಲ್ಲಿರುವ ಅವರ ಕಷ್ಟವು ನಿವಾರಣೆಯಾಗುವದು.

## ಗರ್ಭಿಣಿ ಸ್ತ್ರೀಯರ ಕಷ್ಟ ನಿವಾರಕ ಯಂತ್ರ

| | | | |
|---|---|---|---|
| ೩೮ | ೫೭ | ೧ | ೮ |
| ೫ | ೯ | ೬೨ | ೨೧ |
| ೮೭ | ೨೪ | ೧ | ೮ |
| ೮ | ೧ | ೮೩ | ೮೫ |

ಈ ಯಂತ್ರವನ್ನು ಗುಲಾಬಿ ರಸದಿಂದ ಕಮಲಪತ್ರದ ಮೇಲೆ ಬರೆಯಬೇಕು. ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು, ಅದನ್ನು ನೀರಿನಲ್ಲಿ ಎದ್ದಿ ಆ ನೀರನ್ನು ಗರ್ಭವತಿಯರಾದ ಸ್ತ್ರೀಯರಿಗೆ ಕುಡಿಯಲು ಕೊಡಬೇಕು, ಆಗ ಅವರ ಪ್ರಸವ ಕಾಲದಲ್ಲಾಗುವ ಕಷ್ಟವು ನಿವಾರಣೆ ಹೊಂದುವದು.

ಕೆಂಪು ಕಾಗದದ ಮೇಲೆ ಗುಲಾಬಿ ಲೆಕ್ಕಣಿಕೆಯಿಂದ ಈ ಯಂತ್ರವನ್ನು ಬರೆಯಬೇಕು, ಗುಗ್ಗಳದಿಂದ ಧೂಪ ಕೊಡಬೇಕು, ದೀಪಾದಿಗಳನ್ನು ಹಚ್ಚಿ ಯಂತ್ರವನ್ನು ವಿಧ್ಯುಕ್ತವಾಗಿ ಪೂಜಿಸಬೇಕು, ಈ ಯಂತ್ರವನ್ನು ಯಾವ ಸ್ತ್ರೀಯರಿಗೆ ತೋರಿಸುವರೋ ಅವರ ಸಂಕಷ್ಟಗಳ ನಿವಾರಣೆಯು ಸುಲಭವಾಗಿ ಆಗುವದರಲ್ಲಿ ಯಾವ ಸಂದೇಹವೂ ಇಲ್ಲ.

## ಕಿವಿಶೂಲಿ ಬಾಧೆ ನಿವಾರಿಸುವ ಯಂತ್ರ

| | | | |
|---|---|---|---|
| ೬೩ | ೧೭ | ೯೬ | ೧೫ |
| ೩೬ | ೪೮ | ೩೪ | ೮೪ |
| ೬೩ | ೧೧ | ೩೨ | ೯೧ |
| ೩೪ | ೪೨ | ೫೬ | ೫೭ |

ಈ ಯಂತ್ರವನ್ನು ಕಾಗದದ ಮೇಲೆ ಡಾಳಿಂಬರಿಯ ಹಣ್ಣಿನ ರಸದಿಂದ ಬರೆಯಬೇಕು, ಅದನ್ನು ವಿಧಿಪೂರ್ವಕವಾಗಿ ಪೂಜಿಸಬೇಕು ಅದನ್ನು ಕಿವಿಶೂಲಿಯ ಬಾಧೆಯಿಂದ ನರಳುವವರು ಕಿವಿಗೆ ಕಟ್ಟಿಕೊಂಡಲ್ಲಿ ಅವರ ಬಾಧೆಯು ನಿವಾರಣೆ ಹೊಂದುವದು ಖಾತ್ರಿ ಎಂದು ತಿಳಿಯಬೇಕು.

ಇದಲ್ಲದೇ ತುಳಸಿಯ ದೊಡ್ಡ ಎಲೆಯನ್ನು ತೆಗೆದ ಕೊಂಡು ಅದರ ಮೇಲೆ ಯಾವದಾದರೊಂದು ವನಸ್ಪತಿಯ ರಸದಿಂದ ಈ ಯಂತ್ರವನ್ನು ಬರೆಯಬೇಕು, ನಂತರ ಅದನ್ನು ವಿಧ್ಯುಕ್ತವಾಗಿ ಪೂಜಿಸಿ ತುಳಸಿಯ ರಸ ವನ್ನು ತೆಗೆದು ಕಿವಿಯಲ್ಲಿ ಹಾಕಿಕೊಳ್ಳಲಾಗಿ ಕಿವಿಯ ಶೂಲಿಯು ನಿವಾರಣೆ ಹೊಂದುವದರಲ್ಲಿ ಯಾವ ಸಂದೇಹವೂ ಇಲ್ಲ.

## ಕಾಮನಾಶಕ ಯಂತ್ರ

| | | | |
|---|---|---|---|
| ೯೩ | ೨೫ | ೧೬ | ೧೮ |
| ೩೬ | ೪೬ | ೩೮ | ೪೬ |
| ೪೬ | ೧೧ | ೧೨ | ೭೩ |
| ೮೪ | ೫೨ | ೭೫ | ೫೭ |

ಪುಷ್ಯ ನಕ್ಷತ್ರವಿರುವ ದಿವಸ ಈ ಯಂತ್ರವನ್ನು ತಮ್ಮ ವೀರ್ಯದಿಂದ ಕಾಗದದ ಮೇಲೆ ಈ ಯಂತ್ರ ವನ್ನು ಬರೆದು ತಮ್ಮ ಬಳಿಯಲ್ಲಿ ಇರಿಸಿಕೊಂಡಲ್ಲಿ ಅವರ ಕಾಮ ವಾಸನೆಯು ನಾಶ ಹೊಂದುವದ ರಲ್ಲಿ ಯಾವ ಸಂದೇಹವೂ ಇಲ್ಲ.

ಶುಭ ಸಮಯವೊಂದನ್ನು ಹುಡುಕಿಕೊಂಡು. ಈ ಯಂತ್ರವನ್ನು ಸ್ತ್ರೀಯ ರಕ್ತದಿಂದ ಕಾಗದದ ಮೇಲೆ ಬರೆಯಬೇಕು. ಸ್ತ್ರೀಯ ಬಳಿಗೆ ಹೋಗುವಾಗ ಈ ಯಂತ್ರವನ್ನು ತಮ್ಮ ಬಳಿಯಲ್ಲಿರಿಸಿಕೊಂಡು ಹೋಗ ಬೇಕು. ಅಂದರೆ ಕಾಮವಾಸನೆ ನಾಶವಾಗಿ ಅಲ್ಲಿ ತೊಂದರೆಯಾಗುವದಿಲ್ಲ ವೆಂದು ತಿಳಿದುಕೊಳ್ಳಬೇಕು.

## ಸರ್ಪ ವಿಷನಾಶಕ ಯಂತ್ರ

| | | | |
|---|---|---|---|
| ೭೭ | ೫೫ | ೩ | ೯ |
| ೬ | ೮ | ೪೫ | ೫೩ |
| ೭೬ | ೩೫ | ೯ | ೮ |
| ೭ | ೫ | ೭೪ | ೫೬ |

ಕಾಗದದ ಮೇಲೆ ಚಂದನದಿಂದ ಯಂತ್ರವನ್ನು ಬರೆಯಬೇಕು ಗಂಗಾಜಲದಲ್ಲಿ ಅದನ್ನು ಎದ್ದ ಬೇಕು, ನಂತರ ಯಾರಿಗೆ ಹಾವು ಕಡಿದಿರುವದೋ ಅವರಿಗದನ್ನು ಕುಡಿಯಲು ಕೊಡಬೇಕು, ಅದರಿಂದ ಸರ್ಪ ವಿಷವು ನಾಶವಾಗುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

ಅಲ್ಲದೇ ಕೆಂಪು ವಸ್ತ್ರದ ಮೇಲೆ ಈ ಯಂತ್ರನನ್ನು ಬರೆಯಬೇಕು, ಯಂತ್ರಸಿದ್ಧಿಯ ನಿಯಮಗಳ ಮೇರೆಗೆ ಈ ಯಂತ್ರವನ್ನು ಸಿದ್ಧಗೊಳಿಸಬೇಕು, ಅದನ್ನು ತಾಯಿತದಲ್ಲಿ ಹಾಕಿ ಬಲಗೈಗೆ ಕಟ್ಟಬೇಕು, ಅಂದರೆ ವಿಷವು ಇಳಿದು ಹೋಗುವದು.

## ಪ್ರೇಮವೃದ್ಧಿ ಯಂತ್ರ

| | | | |
|---|---|---|---|
| ೫ | ೪೬ | ೧೭ | ೩೪ |
| ೮ | ೭ | ೮೩ | ೭೫ |
| ೬೪ | ೫೫ | ೩೬ | ೪ |
| ೫ | ೮ | ೩೧ | ೬೫ |

ಕಾಗದದ ಮೇಲೆ ಕರ್ಪೂರದಿಂದ ಈ ಯಂತ್ರವನ್ನು ಬರೆಯಬೇಕು, ಅದನ್ನು ವಿಧಿಪೂರ್ವಕವಾಗಿ ಪೂಜಿಸಬೇಕು, ಅದನ್ನು ನಂತರ ಸುಟ್ಟು ಹಾಕಬೇಕು, ಆಗ ನೀವು ಯಾರನ್ನು ಪ್ರೆಮಿಸುವಿರೊ ಅವರು ನಿಮ್ಮನ್ನು ಪ್ರೇಮಿಸಿ ನಿಮ್ಮನಿಮ್ಮಲ್ಲಿ ಪ್ರೇಮದ ವೃದ್ಧಿಯಾಗಲಿಕ್ಕೆಯಾವ ಸಂದೇಹವೂ ಇಲ್ಲ.

## ದುಃಸ್ವಪ್ನ ನಿವಾ ಕ ಯಂತ್ರ

| | | | |
|---|---|---|---|
| ೪ | ೫೫ | ೧ | ೩೪ |
| ೮ | ೯ | ೮೧ | ೭೫ |
| ೮೬ | ೮೫ | ೧ | ೫ |
| ೫ | ೯ | ೮೩ | ೭೫ |

ಕಾಗದದ ಮೇಲೆ ಈ ಯಂತ್ರವನ್ನು ಬರೆದು ವಿಧ್ಯುಕ್ತವಾಗಿ ಪೂಜಿಸಬೇಕು, ಯಂತ್ರವನ್ನು ರವಿವಾರ ದಿನವೇ ಬರೆಯಬೇಕೆಂಬದನ್ನು ಲಕ್ಷಿಸಬೇಕು, ಅದನ್ನು ತಾಯಿತ ಮಾಡಿಕೊಂಡು ಕೊರಳಲ್ಲಿ ಕಟ್ಟಿಕೊಂಡು ಮಲಗಿಕೊಳ್ಳಬೇಕು, ಅವರಿಗೆ ದುಃಸ್ವಪ್ನಗಳು ಬೀಳುವದಿಲ್ಲ.

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು, ನಂತರ ಅದನ್ನು ವಿಧ್ಯುಕ್ತವಾಗಿ ಪೂಜಿಸಬೇಕು, ಮಲಗುವ ಸಮಯದಲ್ಲಿ ಅದನ್ನು ತಲೆಗಿಂಬಿನ ಕೆಳಗೆ ಇರಿಸಿಕೊಂಡು ಮಲಗಿಕೊಳ್ಳಬೇಕು. ಅಂದರೆ ದುಃಸ್ವಪ್ನಗಳು ಅವರಿಗೆ ಬೀಳುವದಿಲ್ಲೆಂಬದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಸನ್ಮಾನ ಯಂತ್ರವು

| | | | |
|---|---|---|---|
| ೫೬ | ೬೩ | ೩ | ೭ |
| ೬೧ | ೨ | ೬೦ | ೫೫ |
| ೬೦ | ೫೭ | ೮ | ೧ |
| ೪ | ೫ | ೫೮ | ೬೧ |

ಭೋಜಪತ್ರದ ಮೇಲೆ ಈ ಯಂತ್ರವನ್ನು ಬರೆಯಬೇಕು, ಅದನ್ನು ವಿಧಿಪೂರ್ವಕವಾಗಿ ಪೂಜಿಸಬೇಕು ನಂತರ ತಾಮ್ರದ ತಾಯಿತದಲ್ಲಿ ಅದನ್ನು ಹಾಕಿ ಕೊರಳಲ್ಲಿ ಕಟ್ಟಿಕೊಳ್ಳಬೇಕು, ಅವರು ಎಲ್ಲೆಲ್ಲಿ ಹೋಗುವರೋ ಅಲ್ಲಲ್ಲಿ ಅವರಿಗೆ ಯಥೇಚ್ಛ ಮಾನ-ಸನ್ಮಾನಗಳು ಲಭಿಸುವವೆಂದು ತಿಳಿಯಿರಿ.

## ಗರ್ಭ ರಕ್ಷಕ ಯಂತ್ರ

| | | |
|---|---|---|
| ೪ | ೨ | ೨ |
| ೨ | ೪ | ೨ |
| ೨ | ೨ | ೪ |

ಕೆಂಪು ಚಂದನದಿಂದ ಹೊಸ ಬಟ್ಟೆಯ ಮೇಲೆ ಈ ಯಂತ್ರವನ್ನು ಬರೆಯಬೇಕು, ಅದನ್ನು ವಿಧ್ಯುಕ್ತವಾಗಿ ಪೂಜಿಸಿ ಅಭಿಮಂತ್ರಿಸಬೇಕು, ಇದನ್ನು ಗರ್ಭವತಿ ಸ್ತ್ರೀಯರು ತಮ್ಮ ಹೊಟ್ಟೆಗೆ ಕಟ್ಟಿಕೊಳ್ಳಬೇಕು, ಅಂದರೆ ಅವರಿಗೆ ರಾತ್ರಿ ದುಷ್ಟ ಸ್ವಪ್ನಗಳು ಬೀಳುವದಿಲ್ಲ. ಮತ್ತು ಗರ್ಭವು ಸುರಕ್ಷಿತವಾಗಿ ಉಳಿಯುವದು. ಗರ್ಭಿಣಿ ಸ್ತ್ರೀಯರು ಹಿತಮಿತವಾದ ಆಹಾರವನ್ನು ಸೇವಿಸಬೇಕು, ಸ್ವಚ್ಛವಾದ ಗಾಳಿಯಲ್ಲಿ ಅಡ್ಡಾಡಬೇಕು, ದಿನಾಲು ರಾಮ ಚರಿತ್ರೆಯನ್ನು ಓದಬೇಕು, ಅಂದರೆ ಅವರಿಗೆ ಸುಂದರ ಪುತ್ರರತ್ನ ಪ್ರಾಪ್ತಿಯಾಗುವದರಲ್ಲಿ ಯಾವ ಸಂದೇಹವೂ ಇಲ್ಲ.

## ಮಹಾಮಾಯಾ ಯಕ್ಷಿಣಿ ಸಾಧನೆಯು

ಓಂ ಅಜಿ ಸ್ವಾಹಾ

ಓಂ ಮಹಾ ಯೋಗಿನೀ ನಮಃ

| | | | | |
|---|---|---|---|---|
| | | | | |
| | | | | |
| | | | | |

ಓಂ ಮಹಾ ಮಾಯಾ ನಮಃ

ಓಂ ಮಹಾ ಯಕ್ಷಿಣ್ಯೈ ಸ್ವಾಹಾ

ಭೋಜಪತ್ರದ ಮೇಲೆ ಈ ಯಂತ್ರವದನ್ನು ಗೋಪಿಚಂದನ ಹಾಗೂ ಕೇಶರಗಳ ಮಿಶ್ರಣವನ್ನು ಮಾಡಿಕೊಂಡು ಹಂಸಪಕ್ಷದರೆಕ್ಕೆಯನ್ನು ಲೆಕ್ಕಣಿಕೆಯಾಗಿ ಮಾಡಿಕೊಂಡು ಬರೆಯಬೇಕು. ಮೌನವ್ರತವನ್ನು ಪಾಲಿಸಬೇಕು. ಸ್ಮಶಾನಕ್ಕೆ ಹೋಗಿ ಅಲ್ಲಿಂದ ಮಣ್ಣನ್ನು ತರಬೇಕು, ಅದರಿಂದ ಮಹಾಮಾಯಾ ಯಕ್ಷಿಣಿಯ ಮೂರ್ತಿಯನ್ನು ಸಿದ್ಧಪಡಿಸಬೇಕು, ಆ ಮೂರ್ತಿಗೆ ಬಿಳಿಯ ಉಡುಪನ್ನು ಹಾಕಬೇಕು ಮತ್ತು ಬಿಳಿಯ ಹೂಗಳಿಂದ ಅದರ ಪೂಜೆಯನ್ನು. ಶುಭ್ರ ವಸ್ತುಗಳ ನೈವೇದ್ಯವನ್ನು ಅರ್ಪಿಸಬೇಕು, ಧೂಪದೀಪಾದಿಗಳನ್ನು ಕೊಡಬೇಕು. ನಂತರ ಈ ಮೇಲೆ ಬರೆದ ಯಂತ್ರವನ್ನು ಆ ಮೂರ್ತಿಯ ಕೊರಳಲ್ಲಿ ಕಟ್ಟಬೇಕು. ನಂತರ ಜೇನುತುಪ್ಪದ ನೈವೇದ್ಯವನ್ನು ಅರ್ಪಿಸಬೇಕು, ಮುಂದೆ ಯಕ್ಷಿಣಿ ಮಂತ್ರದ ಸಿದ್ಧಿಯನ್ನು ಪಡೆಯಬೇಕು. ಅದರಿಂದ ಮಹಾಮಾಯಾ ಯಕ್ಷಿಣಿಯು ಪ್ರಸನ್ನಳಾಗಿ ಪ್ರಕಟಳಾಗುವಳು. ಅವಳಿಂದ ಯೋಗ್ಯ ಪುಣ್ಯಕರ್ಮಗಳನ್ನು ಮಾಡಿಸಿಕೊಳ್ಳಬೇಕಲ್ಲದೇ ಪಾಪಕರ್ಮಕ್ಕೆ ಕೈ ಹಾಕಬಾರದು. ಪಾಪಕರ್ಮಕ್ಕೆ ಕೈ ಹಾಕಿದರೆ ಸಾಧಕನು ಪಾಪಿಯಾಗುವನೆಂದು ತಿಳಿಯಬೇಕು.

# ಕೆಲವೊಂದು ಔಷಧಿಗಳು

## ವೀರ್ಯ ವರ್ಧಕ ಔಷಧಿ

ಅನೇಕ ಸಲ ಮಿತಿಮೀರಿದ ಕಾಮಕೇಳಿಯಿಂದ ಶರೀರದಲ್ಲಿಯ ವೀರ್ಯವು ಕಡಿಮೆಯಾಗಿ ಅವರಿಗೆ ಸ್ತ್ರೀ ಸಂಭೋಗದಲ್ಲಿ ಆನಂದವು ದೊರೆಯುವದಿಲ್ಲ. ಅದೇ ರೀತಿ ಸಂಭೋಗದಿಂದ ಅವರ ಪತ್ನಿಯರಿಗೂ ಸುಖವೆನಿಸುವದಿಲ್ಲ. ಈ ಸಂದರ್ಭದಿಂದ ಪತಿ ಪತ್ನಿಯರು ದೂರವಾಗುವ ಸಂಭವವೂ ಉಂಟು. ಅದಕ್ಕಾಗಿ ಕೆಲವೊಂದು ಕ್ರಮಗಳಿಂದ ವೀರ್ಯ ವರ್ಧಿಸಿಕೊಳ್ಳುವದು ಅವಶ್ಯವಿರುವದು. ತದನಂತರ ಸ್ತ್ರೀ ಪುರುಷರಿಬ್ಬರಿಗೂ ಆನಂದವೆನಿಸುವದಲ್ಲದೇ ಅಂಥವರಿಗೆ ತೇಜಸ್ವಿಯಾದ ಪುತ್ರನು ಜನಿಸುವನು.

### ಈ ಕೆಳಗಿನ ಔಷಧಗಳನ್ನು ವೀರ್ಯವರ್ಧಕಕ್ಕಾಗಿ ತೆಗೆದುಕೊಳ್ಳಬೇಕು

ಬಿಳಿ ಉಳ್ಳಾಗಡ್ಡಿಯ ರಸ ೬ ಮಾಸಿ, ಖಾರ ಗೆಣಸಿನ ರಸ ೬ ಮಾಸಿ ಜೇನುತುಪ್ಪ ೪ ಮಾಸಿ, ಮತ್ತು ತುಪ್ಪ ೪ ಮಾಸಿ ಹೀಗೆ ತೆಗೆದುಕೊಂಡು ಅವುಗಳ ಸರಿಯಾದ ಮಿಶ್ರಣವನ್ನು ಮಾಡಬೇಕು. ಈ ಮಿಶ್ರಣವನ್ನು ತಪ್ಪದೇ ೧ ತಿಂಗಳ ವರೆಗೆ ತೆಗೆದುಕೊಳ್ಳಲು ವೀರ್ಯವು ವರ್ಧಿಸುವದೆಂದು ತಿಳಿದುಕೊಳ್ಳಬೇಕು.

ಉಳ್ಳಾಗಡ್ಡಿಯ ರಸ ೬ ಮಾಸಿ, ತುಪ್ಪ ೪ ಮಾಸಿ, ಜೇನುತುಪ್ಪ ೩ ಮಾಸಿ ತೆಗೆದುಕೊಂಡು ಅವುಗಳನ್ನು ಚೆನ್ನಾಗಿ ಮಿಶ್ರಣ ಮಾಡಬೇಕು. ಈ ಮಿಶ್ರಣವನ್ನು ದಿನಾಲು ಮುಂಜಾನೆ ಹಾಗೂ ಸಾಯಂಕಾಲ ತೆಗೆದುಕೊಳ್ಳಬೇಕು. ಮಿಶ್ರಣ ತೆಗೆದುಕೊಂಡ ನಂತರ ಸಕ್ಕರೆ ಹಾಕಿದ ಹಾಲು ತೆಗೆದುಕೊಳ್ಳಬೇಕು. ಈ ರೀತಿ ೨ ತಿಂಗಳ ವರೆಗೆ ಮಿಶ್ರಣ ಹಾಗೂ ಹಾಲು

ತೆಗೆದುಕೊಳಲು ನಪುಂಸಕತೆಯು ನಷ್ಟವಾಗಿ ವೀರ್ಯವರ್ಧನವಾಗುವದು ಅತಿ ಖಾತ್ರಿ ಎಂದು ತಿಳಿದುಕೊಳ್ಳಬೇಕು.

ತ್ರಿಫಳ, ಶಿಲಾಜಿತ ಹಾಗೂ ತುಪ್ಪ ಇವನ್ನು ಸಮಭಾಗದಲ್ಲಿ ತೆಗೆದುಕೊಂಡು ಚೆನ್ನಾಗಿ ಮಿಶ್ರಣವನ್ನು ಸಿದ್ಧಪಡಿಸಬೇಕು, ಈ ಮಿಶ್ರಣವನ್ನು ೧ ತೊಲೆಯಷ್ಟು ದಿನಾಲು ತೆಗೆದುಕೊಂಡು ನಂತರ ಸಕ್ಕರೆ ಕೂಡಿದ ಹಾಲನ್ನು ತೆಗೆದುಕೊಳ್ಳಬೇಕು.

ಕರಿ ಧತ್ತೂರಿಯ ಹೂವುಗಳನ್ನು ತಂದು ನೆರಳಿನಲ್ಲಿ ಅವನ್ನು ಚೆನ್ನಾಗಿ ಒಣಗಿಸಿ ನಂತರ ಅವುಗಳನ್ನು ಅರಿದು ಚೂರ್ಣವನ್ನು ಸಿದ್ಧಪಡಿಸಬೇಕು, ಜೇನುತುಪ್ಪದಲ್ಲಿ ಈ ಚೂರ್ಣವನ್ನು ಸೇರಿಸಿ ಒಂದೊಂದು ಗುಳಿಗೆಯನ್ನು ತಯಾರಿಸಬೇಕು, ಪ್ರತಿದಿವಸ ಒಂದು ಗುಳಿಗೆಯನ್ನು ಹಾಲಿನಲ್ಲಿ ತೆಗೆದುಕೊಳ್ಳಬೇಕು, ಈ ರೀತಿ ೪೦ ದಿವಸ ತೆಗೆದುಕೊಳ್ಳಲಾಗಿ ಸಾಕಷ್ಟು ವೀರ್ಯವೃದ್ಧಿಯಾಗುವದೆಂದು ತಿಳಿದುಕೊಳ್ಳಬೇಕು.

ಶತಾವರಿ ಚೂರ್ಣ ೧ ತೊಲಿ ಮತ್ತು ೧ ತೊಲಿ ಸಕ್ಕರಿ ಇವನ್ನು ಮುಂಜಾನೆ ಹಾಗೂ ಸಾಯಂಕಾಲ ತೆಗೆದುಕೊಳ್ಳಬೇಕು, ಅದರ ಮೇಲೆ ಹಾಲು ತೆಗೆದುಕೊಳ್ಳಬೇಕು, ಇದರಿಂದ ವೀರ್ಯವೃದ್ಧಿಯಾಗುವದೆಂದು ತಿಳಿದುಕೊಳ್ಳಬೇಕು.

೨ ತೊಲಿ ಪಿಸ್ತೆ, ೨ ತೊಲಿ ಕಲ್ಲುಸಕ್ಕರೆ, ೬ ಮಾಸಿ ಶುಂಠಿ ಹಾಗೂ ೧ ಗುಂಜಿ ಉಪ್ಪು ಇಷ್ಟನ್ನೆಲ್ಲ ಸೇರಿಸಿ ಅವುಗಳ ಮಿಶ್ರಣದ ೧ ಚೂರ್ಣವನ್ನು ಸಿದ್ಧಪಡಿಸಬೇಕು, ಅದರಲ್ಲಿ ೧ ತೊಲಿ ಜೇನುತುಪ್ಪ ಹಾಕಿ ಮಿಶ್ರಣ ಸಿದ್ಧಪಡಿಸಬೇಕು, ಈ ಮಿಶ್ರಣವನ್ನು ೧ ತಿಂಗಳ ವರೆಗೆ ಸಾಧಿಸಲಾಗಿ ಚೆನ್ನಾಗಿ ವೀರ್ಯವೃದ್ಧಿಯಾಗುವದೆಂದು ತಿಳಿದುಕೊಳ್ಳಬೇಕು.

## ಉದರ ಶೋಧನಕ್ಕಾಗಿ ಔಷಧ

ಹೊಟ್ಟೆಯು ಸ್ವಚ್ಛವಾಗಿರದಿರುವದು ವೀರ್ಯವಿಕಾರವಾಗಲು ಒಂದು ಕಾರಣವಾಗಿರುವದು. ಅದಕ್ಕಾಗಿ ದಿನಾಲು ಹೊಟ್ಟೆಯನ್ನು ಸ್ವಚ್ಛವಾಗಿಡಲು ಪ್ರಯತ್ನವನ್ನು ಮಾಡಬೇಕಾಗುವದು.

ಊಟದಲ್ಲಿ ಹೆಚ್ಚು ಕಾಯಿ ಪಲ್ಲೆ ತೆಗೆದುಕೊಳ್ಳುವದು, ಒಂದು ನಿಯಮಿತ ಕ್ರಮವಾಗಿರುವದು. ೮ ಇಲ್ಲವೇ ೧೫ ದಿವಸಗಳಿಗೊಮ್ಮೆ ಔಡಲ ಎಣ್ಣೆಯನ್ನು ತೆಗೆದುಕೊಳ್ಳಬೇಕು. ಯಾವದೇ ವೀರ್ಯವರ್ಧಕ ಔಷಧ ತೆಗೆದುಕೊಳ್ಳುವ ಮೊದಲು ಜುಲಾಬನ್ನು ಅವಶ್ಯವಾಗಿ ತೆಗೆದುಕೊಳ್ಳಬೇಕು.

## ಸ್ವಪ್ನದೋಷ ನಾಶಕ ಔಷಧ

ಊಟದ ನಂತರ ದಿನಾಲು ಒಂದೆರಡು ಬಾಳೆಹಣ್ಣುಗಳನ್ನು ನಿಯಮಿತವಾಗಿ ಸೇವಿಸಬೇಕು.

ಮುಂಜಾನೆ ೧ ಬಾಳೆಹಣ್ಣಿನಲ್ಲಿ ೪-೫ ಜೇನುತುಪ್ಪದ ಹನಿಗಳನ್ನು ಹಾಕಿ ತೆಗೆದುಕೊಳ್ಳಬೇಕು.

ಜೇಷ್ಠಮಧು ಚೂರ್ಣ ೨ ಮಾಸಿ, ೧ ತೊಲಿ ತುಪ್ಪ, ೬ ಮಾಸಿ ಜೇನುತುಪ್ಪ ಒಂದುಗೂಡಿಸಿ ದಿನಾಲು ಮುಂಜಾನೆ ಈ ಮಿಶ್ರಣವನ್ನು ಸೇವಿಸಬೇಕು. ತದನಂತರ ೧ ಕಪ್ಪು ಹಾಲು ಕುಡಿಯಬೇಕು.

ಗುಲಾಬ ಶರಬತ್ತು, ಚಂದನ ಶರಬತ್ತು, ವಾಳ ಶರಬತ್ತುಗಳಲ್ಲಿ ಒಂದು ಶರಬತ್ತಿನಲ್ಲಿ ೨ ಗುಂಜಿಯಷ್ಟು ಪ್ರವಾಳ ಭಸ್ಮವನ್ನು ಹಾಕಿಕೊಂಡು ದಿನಾಲು ನಿಯಮಿತ ರೀತಿಯಲ್ಲಿ ತೆಗೆದುಕೊಳ್ಳಬೇಕು.

ದಿನಾಲು ಮುಂಜಾನೆ ಸುವಾಸಿತ ಗುಲಾಬಿಯ ೩ ಹೂವುಗಳನ್ನು ಸ್ವಚ್ಛ ಮಾಡಿ ಸಕ್ಕರೆಯಲ್ಲಿ ಸೇರಿಸಿ ತೆಗೆದುಕೊಂಡು ಮೇಲೆ ಆಕಳ ಹಾಲು ಕುಡಿಯಬೇಕು.

೧ ಕಾಗದಿ ಬದಾಮು, ೩ ಮಾಸಿ ಸಕ್ಕರೆ, ೩ ಮಾಸಿ ಶುದ್ಧ ತುಪ್ಪ, ೩ ಮಾಸಿ ಗುಳವೇಲ ಸತ್ವ, ೬ ಮಾಸಿ ಜೇನುತುಪ್ಪ ಇವನ್ನೆಲ್ಲ ಒಂದುಗೂಡಿಸಬೇಕು. ಇದನ್ನು ದಿನಾಲು ಬೆಳಿಗ್ಗೆ ಹಾಗೂ ಸಾಯಂಕಾಲ ತೆಗೆದುಕೊಳ್ಳಬೇಕು. ೪೦ ದಿವಸಗಳ ವರೆಗೆ ತೆಗೆದುಕೊಂಡಲ್ಲಿ ಗುಣವಾಗುವದೆಂದು ತಿಳಿಯಬೇಕು.

ತ್ರಿಫಳಾ ಚೂರ್ಣವನ್ನು ಜೇನುತುಪ್ಪದಲ್ಲಿ ಸೇರಿಸಿ ರಾತ್ರಿ ಕಾಲಕ್ಕೆ ತೆಗೆದುಕೊಳ್ಳಬೇಕು. ಉಷ್ಣತೆ ಬಹಳವಿದ್ದಲ್ಲಿ ಜೇನುತುಪ್ಪದ ಬದಲು ಸಕ್ಕರೆಯಲ್ಲಿ ಹಾಕಿ ತೆಗೆದುಕೊಳ್ಳಬೇಕು. ಮೇಲೆ ನೀರು ಕುಡಿಯಬೇಕು.

ಆವಳಾಚೂರ್ಣವನ್ನು ೬ ಮಾಸಿ ಜೇನುತುಪ್ಪದಲ್ಲಿ ತೆಗೆದುಕೊಳ್ಳಬೇಕು. ಅಲ್ಲದೇ ಚಂದ್ರಪ್ರಭಾವತಿಯು ಸ್ವಪ್ನದೋಷಕ್ಕೆ ಅತ್ಯಂತ ರಾಮಬಾಣ ಔಷಧವಾಗಿರುವದು. ಹರಡಾ ಚೂರ್ಣವನ್ನು ೩ ಮಾಸಿ ಜೇನುತುಪ್ಪದಲ್ಲಿ ತೆಗೆದುಕೊಳ್ಳಬೇಕು.

## ವೀರ್ಯಸ್ತಂಭಕ ಔಷಧಿ

ಅನೇಕ ಪುರುಷರು ಸಂಭೋಗ ಕಾಲದಲ್ಲಿ ಸ್ತ್ರೀ ಸ್ಖಲಿತಳಾಗುವ ಮೊದಲೇ ತಾವು ಸ್ಖಲಿತರಾಗುವರು. ಅಂದರೆ ವೀರ್ಯಪ್ರಾತವಾಗುವದೆಂದು ತಿಳಿದುಕೊಳ್ಳಬೇಕು. ಇದರಿಂದ ಸ್ತ್ರೀಯರು ಅಸಮಾಧಾನಗೊಳ್ಳುವರಲ್ಲದೇ ಅವರ ಕಾಮೇಚ್ಛೆಯು ತೃಪ್ತವಾಗುವದಿಲ್ಲ. ಪತಿಯಲ್ಲಿ ಅವರಿಗೆ ತಿರಸ್ಕಾರವುಂಟಾಗುವ ಸಂಭವವೂ ಇರುವದು. ಅದಕ್ಕಾಗಿ ಕೆಲವೊಂದು ಔಷಧಗಳನ್ನು ತೆಗೆದುಕೊಂಡಲ್ಲಿ ಸ್ತ್ರೀ ಮೊದಲು ಸ್ಖಲಿತಳಾದ ನಂತರ ಪುರುಷನು ಸ್ಖಲಿತನಾಗುವನು, ಇದರಿಂದ ಸ್ತ್ರೀ ಪುರುಷರಿಬ್ಬರಲ್ಲಿ ಪ್ರೇಮವು ಉಳಿಯುವದು.

ಕೆಲವೊಮ್ಮೆ ಪುರುಷರಲ್ಲಿ ಸಾಕಷ್ಟು ವೀರ್ಯವಿರುವದಿಲ್ಲ. ಅಂಥವರು ಮೊದಲು ವೀರ್ಯವರ್ಧಕವನ್ನು ತೆಗೆದುಕೊಂಡು ಪೌಷ್ಟಿಕ ಔಷಧವನ್ನು ತೆಗೆದುಕೊಳ್ಳಬೇಕು, ಇಲ್ಲವಾದರೆ ಕೇವಲ ವೀರ್ಯಸ್ತಂಭಕ ಔಷಧ ತೆಗೆದುಕೊಳ್ಳುವದರಿಂದ ಪ್ರಯೋಜನವೇನು? ಪೇಟೆಯಲ್ಲಿ ಸಿಗುವ ಅನೇಕ ಔಷಧಿಗಳಲ್ಲಿ ಅಫು ಭಾಂಗ ಇರುವದರಿಂದ ಮೊದಲು ಕೆಲ ದಿನ ಸ್ತಂಭನವಾಗುವದಾದರೂ ಮುಂದೆ ಅವು ನಿರುಪಯೋಗಿಯಾಗುವವು. ಒಮ್ಮೊಮ್ಮೆ ದುಷ್ಪರಿಣಾಮವಾಗಿ ರೋಗ ತಗಲುವ ಭೀತಿಯೂ ಇರುವದು

ಅಶ್ವಗಂಧ, ಕರಿಎಳ್ಳು, ಶುಂಠಿ, ಬೆಲ್ಲ, ತುಪ್ಪ ಹಾಗೂ ಉದ್ದಿನಬೇಳೆ ಹಿಟ್ಟನ್ನು ಸಮಪ್ರಮಾಣದಲ್ಲಿ ತೆಗೆದುಕೊಳ್ಳಬೇಕು, ಎಳ್ಳು ಹಾಗೂ ಉದ್ದಿನ

ಹಿಟ್ಟನ್ನು ತುಪ್ಪದಲ್ಲಿ ಹುರಿಯಬೇಕು. ನಂತರ ಎಲ್ಲವನ್ನು ಸೇರಿಸಿ ಸಣ್ಣ ಉಂಡೆಗಳನ್ನು ಕಟ್ಟಬೇಕು. ದಿನಾಲು ೧ ಉಂಡೆಯಂತೆ ಸೇವಿಸುತ್ತ ಹೋದಲ್ಲಿ ಸಾಕಷ್ಟು ಶಕ್ತಿ ಬಂದು ವೀರ್ಯಸ್ತಂಭನವಾಗುವದೆಂದು ತಿಳಿಯಿರಿ.

ಕರಿಎಳ್ಳು ಹಾಗೂ ದಾಲಚಿನ್ನಿಗಳನ್ನು ಇವುಗಳ ಚೂರ್ಣವನ್ನು ಸಮ ಭಾಗದಲ್ಲಿ ಒಂದುಗೂಡಿಸಬೇಕು. ಈ ಮಿಶ್ರಣದ ೬ ಮಾಸಿ ಚೂರ್ಣ ವನ್ನು ಜೇನುತುಪ್ಪದಲ್ಲಿ ಕಲಿಸಬೇಕು, ಅದನ್ನು ತೆಗೆದುಕೊಂಡು ೧ ತಾಸಿನ ನಂತರ ಸ್ತ್ರೀ ಸಂಭೋಗವನ್ನು ಮಾಡಬೇಕು, ಆಗ ವೀರ್ಯವು ಬಹಳವೇಳೆಯ ವರೆಗೆ ಸ್ತಂಭನವುಳಿದು ಬಹಳೇ ವಿಷಯಾನಂದವನ್ನು ನೀವು ಪಡೆಯುವಿರಿ.

೧ ತೊಲಿ ಜೇಷ್ಟಮಧುವಿನ ಚೂರ್ಣವನ್ನು ೧ ತೊಲಿ ಜೇನುತುಪ್ಪ ದಲ್ಲಿ ಸೇರಿಸಿ ತೆಗೆದುಕೊಳ್ಳಬೇಕು, ಅದರ ಮೇಲೆ ಆಕಳ ಹಾಲನ್ನು ತೆಗೆದು ಕೊಳ್ಳಬೇಕು, ಸ್ತ್ರೀ ಸಂಭೋಗ ಕಾಲದಲ್ಲಿ ವೀರ್ಯಸ್ತಂಭನವಾಗಿ ಅತ್ಯಂತ ಆನಂದ ಲಭಿಸುವದು.

ಜಾಯಫಳ ೩ ಮಾಸಿ, ಲವಂಗ ೬ ಮಾಸಿ, ರುಮಿಮುಸ್ತಗಿ ೬ ಮಾಸಿ ಏಲಕ್ಕಿ ೬ ಮಾಸಿ ಇವನ್ನು ಕೂಡಿಸಿ ಕುಟ್ಟಿ ಚೂರ್ಣವೊಂದನ್ನು ಸಿದ್ಧಪಡಿಸ ಬೇಕು, ಜೇನುತುಪ್ಪದಲ್ಲಿ ಅವನ್ನೆಲ್ಲ ಸೇರಿಸಿ ಗುಳಿಗೆಗಳನ್ನು ಸಿದ್ಧಪಡಿಸ ಬೇಕು, ಪ್ರತಿದಿವಸ ರಾತ್ರಿ ಊಟವಾದ ನಂತರ ಹಾಲಿನಲ್ಲಿ ೧ ಗುಳಿಗೆ ತೆಗೆದುಕೊಳ್ಳಬೇಕು, ಅಲ್ಲದೇ ಹಾಲು ಅನ್ನದ ಊಟವನ್ನು ಮಾಡಬೇಕು ಅಂದರೆ ವೀರ್ಯಸ್ತಂಭನವಾಗಿ ವಿಷಯಾನಂದವಾಗುವದು.

## ಸ್ತ್ರೀ ದ್ರಾವಣ ಪ್ರಯೋಗ

ಜೇನುತುಪ್ಪ ಹಾಗೂ ಗಂಧಕವನ್ನು ಒಂದುಗೂಡಿಸಬೇಕು, ಅದನ್ನು ಲಿಂಗಕ್ಕೆ ಲೇಪಿಸಿಕೊಂಡು ನಂತರ ಸ್ತ್ರೀ ಸಂಭೋಗ ಮಾಡಬೇಕು, ಅಂದರೆ ಸ್ತ್ರೀ ಪುರುಷನಿಗಿಂತ ಮೊದಲು ಸ್ಖಲಿತ ಹೊಂದುವಳೆಂದು ತಿಳಿಯಿರಿ.

ಸಂಭೋಗದ ಮೊದಲು ಸ್ತ್ರೀಗೆ ವಿಡಾದಲ್ಲಿ ೧ ಗುಂಜಿ ತಾಂಕಣ ಖಾರ ಹಾಕಿ ಕೊಡಬೇಕು, ನಂತರ ಮೈಥುನ ಮಾಡಬೇಕು, ಆಗ ಸ್ತ್ರೀಯೇ ಮೊದಲಿಗೆ ದ್ರಾವಿತ ಹೊಂದುವಳು.

ಕರ್ಪೂರ, ತಾಂಕಣಖಾರ ಹಾಗೂ ಹಲಸಿನ ರಸಗಳನ್ನು ಸಮಭಾಗ ದಲ್ಲಿ ತೆಗೆದುಕೊಂಡು ಲಿಂಬಿಹಣ್ಣಿನ ರಸದಲ್ಲಿ ಸೇರಿಸಿ ಲಿಂಗಕ್ಕೆ ಲೇಪಿಸಿ ಕೊಂಡು ಸ್ತ್ರೀ ಸಂಭೋಗ ಮಾಡಬೇಕು, ಆಗ ಸ್ತ್ರೀ ಮೊದಲಿಗೇ ದ್ರಾವಿತ ಹೊಂದುವಳು.

ಶುಂಠಿ, ಮಿರಿ ಹಾಗೂ ಪಿಂಪಳಿ ಇವುಗಳ ಚೂರ್ಣವನ್ನು ಜೇನುತುಪ್ಪ ದಲ್ಲಿ ಸೇರಿಸಿ ಯೋನಿಗೆ ಹಚ್ಚಬೇಕು, ನಂತರ ರತಿಕರ್ಮದಲ್ಲಿ ನಿರತರಾಗಲು ಸ್ತ್ರೀಯು ಪುರುಷನಿಗಿಂತ ಮೊದಲೇ ದ್ರವಿಸುವಳು.

ಸಿಂದೂರ ಹಾಗೂ ಜೇನುತುಪ್ಪಗಳನ್ನು ಕೂಡಿಸಿ ಲಿಂಗಕ್ಕೆ ಲೇಪಿಸಿ ಕೊಳ್ಳಬೇಕು, ನಂತರ ಸ್ತ್ರೀ ಸಂಭೋಗ ಮಾಡಿದಲ್ಲಿ ಸ್ತ್ರೀ ಪುರುಷನಿಗಿಂತ ಮೊದಲೇ ಸ್ಖಲಿತಳಾಗುವಳು.

ಕರ್ಪೂರ ಹಾಗೂ ಹಲಸಿನ ರಸಗಳನ್ನು ಕೂಡಿಸಿ ಲೇಪ ಸಿದ್ಧಪಡಿಸಿ ಕೊಂಡು ಸಂಭೋಗ ಕಾಲದಲ್ಲಿ ಅದನ್ನು ಲಿಂಗಕ್ಕೆ ಲೇಪಿಸಿಕೊಂಡು ಮೈಥುನ ಮಾಡಬೇಕು, ಆಗ ಸ್ತ್ರೀ ಮೊದಲಿಗೆ ಸ್ಖಲಿತ ಹೊಂದುವಳು.

ಟಾಂಕಣಖಾರ ಹಾಗೂ ಹಲಸಿನ ರಸಗಳನ್ನು ಕೂಡಿಸಿ ಅರೆದು ಲೇಪ ವೊಂದನ್ನು ತಯಾರಿಸಿ ಲಿಂಗದ ಮೇಲೆ ಲೇಪಿಸಿಕೊಂಡು ಸಂಭೋಗ ಮಾಡಿ ದಲ್ಲಿ ಪುರುಷನಿಗಿಂತ ಮೊದಲೇ ಸ್ತ್ರೀ ದ್ರವಿಸುವಳು.

## ಲಿಂಗಸ್ಥೂಲೀ ಕರಣ

ಒಮ್ಮೊಮ್ಮೆ ಅತಿಮೈಥುನ ಇಲ್ಲವೇ ಹಸ್ತಮೈಥುನದಿಂದ ಪುರುಷರ ಲಿಂಗವು ಸಣ್ಣದಾಗುವದು, ಅಲ್ಲದೇ ಅವರ ಮನಸ್ಸಿನಲ್ಲಿ ನಪುಂಸಕತೆಯ ಭಾವನೆಯು ತಲೆದೋರುವದು, ಆದರೆ ಅದರಿಂದ ಗಾಬರಿಯಾಗಬಾರದು, ಕೆಲವೊಂದು ಉಪಚಾರಗಳಿಂದ ಲಿಂಗವು ಮೊದಲಿನಂತೆಯೇ ಆಗುವದು, ಈ ವಿಕಾರವು ಕಡಿಮೆಯಾಗಿದ್ದಲ್ಲಿ ಕೆಳಗಿನ ಉಪಚಾರಗಳನ್ನು ಅನುಸರಿಸಿರಿ.

ಜೇನ ತುಪ್ಪ ಹಾಗೂ ಬೆಲಪತ್ರಿಯ ರಸವನ್ನು ಕೂಡಿಸಿ ಲಿಂಗದ ಮೇಲೆ ಲೇಪಿಸಬೇಕು, ಕೆಲದಿವಸಗಳಲ್ಲಿಯೇ ಲಿಂಗವು ಮೊದಲಿನಂತೆ ದಷ್ಟಪುಷ್ಟವಾಗುವದು ಕಾಣಬರುವದು.

ಹೊಸ ಜಾಯಫಳಗಳನ್ನು ಎಮ್ಮಿ ಹಾಲಿನಲ್ಲಿ ತೇಯಿದು ಲಿಂಗದ ಮೇಲೆ ಲೇಪಿಸಿಕೊಳ್ಳಬೇಕು, ಅದರಿಂದ ಲಿಂಗವು ದೃಢವಾಗುವದು.

ದಾಲಚಿನ್ನಿ ಹಾಗೂ ಲವಂಗಗಳ ಎಣ್ಣೆಯನ್ನು ಕೂಡಿಸಿ ಅದನ್ನು ಲಿಂಗಕ್ಕೆ ಹಚ್ಚಬೇಕು, ಹೀಗೆ ೧ ತಿಂಗಳ ವರೆಗೆ ಹಚ್ಚಿದ ನಂತರ ಲಿಂಗವು ದೃಢವಾಗುವದು.

ಲವಂಗ, ಸಮುದ್ರ ಹೂವು ಹಾಗೂ ವಂಗ ಭಸ್ಮ ಇವುಗಳನ್ನು ಸಮ ಭಾಗದಲ್ಲಿ ತೆಗೆದುಕೊಂಡು ವಿಳ್ಯದೆಲೆಯ ರಸದಲ್ಲಿ ಸೇರಿಸಿ ಅದನ್ನು ಲಿಂಗಕ್ಕೆ ಲೇಪಿಸಬೇಕು, ಅದರಿಂದ ಇಂದ್ರಿಯವು ದೊಡ್ಡದಾಗುವದು ಕಾಣಬರುವದು

ಅಫು, ಸಾಸ್ವಿಗಿಡದ ಬೇರು ಹಾಗೂ ಅಕ್ಕಲಿಕಾರಾ ಇವನ್ನು ಕೂಡಿಸಿ ಧತ್ತೂರಿಯ ರಸದಲ್ಲಿ ಹಾಕಬೇಕಾಗುವದು, ನಂತರ ಈ ಲೇಪವನ್ನು ಲಿಂಗಕ್ಕೆ ಹಚ್ಚಿಕೊಳ್ಳಲಾಗಿ ಲಿಂಗವು ದೃಢವಾಗುವದು.

ಆಕಳ ತುಪ್ಪದಲ್ಲಿ ತುಳಸಿ ಎಲೆಯ ರಸವನ್ನು ಹಾಕಿ ಒಣಗಿಸಬೇಕು, ನೀರು ಅಟ್ಟಿಸಿ ಹೋದ ನಂತರ ಉಳಿಯುವ ತುಪ್ಪವನ್ನು ದಿನಾಲು ಇಂದ್ರಿಯಕ್ಕೆ ಲೇಪಿಸಿ ಮರ್ದಿಸುತ್ತ ಹೋಗಬೇಕು, ಅದರಿಂದಾಗಿ ಲಿಂಗವು ದೃಢವಾಗುವದೆಂಬದು ಕಾಣ ಬರುವದು.

ದಿನಾಲು ತಾಜಾ ಹಾಲಿನಿಂದ ಮೊದಲೇ ಲಿಂಗವನ್ನು ಮರ್ದಿಬೇಕು. ತದನಂತರ ಮಣ್ಣಿನ ಹುಳದ ಚೂರ್ಣದಿಂದ ಲಿಂಗವನ್ನು ಮರ್ದಿಸಬೇಕು, ೧ ತಿಂಗಳ ವರೆಗೆ ಹೀಗೆ ಮಾಡಿದ ನಂತರ ಲಿಂಗವು ದೊಡ್ಡದಾಗುವದೆಂದು ಕಾಣ ಬರುವದು.

## ಯೋನಿ ಶೋಧಕ

ಲಿಂಬಿ ಎಲೆಯ ರಸದಿಂದ ಯೋನಿಯನ್ನು ತೊಳೆಯಬೇಕು, ಅಂದರೆ ಬಹು ದಿನಗಳಿಂದ ಇದ್ದ ದುರ್ಗಂಧಿಯು ನಷ್ಟವಾಗುವದು.

ಅರಿಷಣ, ಕಮಲ, ಕೇಶರ ಹಾಗೂ ದೇವದಾರಗಳನ್ನು ಸಮಭಾಗ ದಲ್ಲಿ ತೆಗೆದುಕೊಂಡು ಮಿಶ್ರಣವನ್ನು ಸಿದ್ಧಪಡಿಸಬೇಕು. ಅದನ್ನು ಯೋನಿಗೆ ಲೇಪಿಸಿಕೊಂಡಲ್ಲಿ ಯೋನಿ ಚಿಕ್ಕದಾಗುವದು, ಹಾಗೂ ಶುದ್ಧವಾಗುವದು, ೧೬ ವರ್ಷದ ಯುವತಿಯಂತೆ ಆಗುವದು, ಸಂಭೋಗ ಕಾಲದಲ್ಲಿ ಇದರಿಂದ ಪತಿಗೆ ಅತಿ ಸುಖ ದೊರೆತು ಅವನು ಅವರ ವಶದಲ್ಲಿಯೇ ಉಳಿಯುವನು.

ಯೋನಿಯು ದುರ್ಗಂಧವಾಗಿರುವದೆಂದು ಕಂಡು ಬಂದಲ್ಲಿ ನಿಯ ಮಿತವಾಗಿ ಗುಗ್ಗುಳದ ಹೊಗೆಯನ್ನು ಕೊಡುತ್ತ ಹೋಗಬೇಕು, ಅಂದರೆ ಯೋನಿಯು ಶುದ್ಧವಾಗುವದೆಂದು ತಿಳಿಯಬೇಕು.

ಕುಹಿಲಿಬೇರು ತೆಗೆದುಕೊಂಡು ಬಂದು ಅದರ ಕಷಾಯವನ್ನು ಸಿದ್ಧ ಪಡಿಸಬೇಕು, ಆ ಕಷಾಯದಿಂದ ಯೋನಿಯನ್ನು ಕೆಲ ದಿನಗಳ ವರೆಗೆ ತೊಳೆಯುತ್ತ ಹೋಗಬೇಕು, ಆಗ ಆ ಯೋನಿಯು ಸಂಕುಚಿತ ಹೊಂದುವ ದೆಂದು ತಿಳಿಯಿರಿ.

ಅಫುವಿನ ಒಂದು ಚಿಕ್ಕ ಗಂಟನ್ನು ಮಾಡಿ ಅದನ್ನು ಯೋನಿಯಲ್ಲಿ ಇರಿಸಿಕೊಂಡರೆ ಯೋನಿಯು ಸಂಕುಚಿತಗೊಳ್ಳುವದೆಂದು ತಿಳಿಯಿರಿ.

## ಸಂತತಿದಾಯಕ ಔಷಧ

ನಾಗಕೇಶರ ಹಾಗೂ ಅಡಿಕೆಯ ಚೂರ್ಣವನ್ನು ನಿಯಮಿತವಾಗಿ ಸೇವಿಸಿದರೆ ಗರ್ಭ ನಿಲ್ಲುವದೆಂದು ತಿಳಿದುಕೊಳ್ಳಬೇಕು.

ಅಶ್ವಗಂಧ ಚೂರ್ಣವನ್ನು ದಿನಾಲು ಬೆಳಿಗ್ಗೆ ಹಾಗೂ ಸಾಯಂಕಾಲ ನಿಯಮಿತವಾಗಿ ಹಾಲಿನಲ್ಲಿ ತೆಗೆದುಕೊಳ್ಳಬೇಕು. ಅದರಿಂದ ಅತ್ಯವಶ್ಯವಾಗಿ ಗರ್ಭಧಾರಣವಾಗುವದು

ಅಶ್ವಗಂಧ ನಾಗಕೇಶರ ಹಾಗೂ ಗೋಪಿಚಂದನಗಳನ್ನು ಸಮ ಪ್ರಮಾಣದಲ್ಲಿ ತೆಗೆದುಕೊಂಡು ಚೂರ್ಣವನ್ನು ಸಿದ್ಧಪಡಿಸಬೇಕು, ಆ ಚೂರ್ಣವನ್ನು ತಾಜಾ ನೀರಿನಲ್ಲಿ ತೆಗೆದುಕೊಳ್ಳಲಾಗಿ ಗರ್ಭವು ನಿಲ್ಲುವ ದೆಂದು ತಿಳಿದುಕೊಳ್ಳಬೇಕು.

ಹಸ್ತಿದಂತದ ಚೂರ್ಣವನ್ನು ದಿನಾಲು ೪॥ ಮಾಸಿಯಷ್ಟು ಸೇವಿಸಿ ದಲ್ಲಿ ಗರ್ಭವು ನಿಲ್ಲುವದೆಂದು ತಿಳಿಯಬೇಕು.

ದಿನಾಲು ೧ ಮುಷ್ಟಿ ತುಂಬ ಓವಾ ತೆಗೆದುಕೊಳ್ಳಬೇಕು, ಅಂದರೆ ಗರ್ಭವು ನಿಲ್ಲುವದು ಖಾತ್ರಿ ಎಂದು ತಿಳಿಯಿರಿ.

ಶುಂಠಿ, ಉತ್ತತ್ತಿ ತಿಳಲು, ವಂಶಲೋಚನ, ನೌಗೌಲಿ ಹಾಗೂ ಅಶ್ವ ಗಂಧ ಇವನ್ನು ಸಮಪ್ರಮಾಣದಲ್ಲಿ ಕೂಡಿಸಿ ಚೂರ್ಣ ಮಾಡಬೇಕು, ಸ್ತ್ರೀಯರು ಮಾಸಿಕ ಕ್ರಮದ ನಂತರ ೪ ನೇ ದಿನದಿಂದ ೧೨ ದಿನಗಳ ವರೆಗೆ ದಿನಾಲು ೨ ಮಾಸಿಗಳಷ್ಟು ಚೂರ್ಣವನ್ನು ಸೇವಿಸಬೇಕು, ಅಂದರೆ ಗರ್ಭವು ನಿಲ್ಲುವದು ಖಾತ್ರಿ ಎಂದು ತಿಳಿಯಿರಿ

ಚಮೇಲಿ ಬೇರಿನ ಚೂರ್ಣವನ್ನು ದಿನಾಲು ೪ ಮಾಸಿಗಳಷ್ಟು ಆಕಳ ಹಾಲಿನಲ್ಲಿ ತೆಗೆದುಕೊಳ್ಳಬೇಕು, ಅಂದರೆ ಗರ್ಭವು ನಿಶ್ಚಿತವಾಗಿ ನಿಲ್ಲುವ ದೆಂದು ತಿಳಿಯಿರಿ.

## ಗರ್ಭ ಸ್ತಂಭನಕ್ಕಾಗಿ

ಜೇಷ್ಟಮಧು, ಕಮಲದ ದೇಟುಗಳನ್ನು ಆಕಳ ಹಾಲಿನಲ್ಲಿ ಸೇರಿಸಿ ಗರ್ಭವತಿ ಸ್ತ್ರೀಯರಿಗೆ ಕೊಡಬೇಕು, ಅಂದರೆ ಗರ್ಭಪಾತವಾಗುವದಿಲ್ಲೆಂದು ತಿಳಿದುಕೊಳ್ಳಬೇಕು.

ಬಿಳಿ ಕಣಗಲ ಬೇರು, ಕಲ್ಲಸಕ್ಕರೆ, ಕೇಶರ, ಸುರಣ ಹಾಗೂ ಪಹಾಡವೇಲಗಳನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಚೂರ್ಣವನ್ನು

ಸಿದ್ಧಪಡಿಸಬೇಕು, ಅದನ್ನು ಯೋಗ್ಯ ಪ್ರಮಾಣವಲ್ಲಿ ಜೇನುತುಪ್ಪದೊಳಗೆ ಸೇರಿಸಿ ಗರ್ಭವತಿ ಸ್ತ್ರೀಯರಿಗೆ ಕೊಟ್ಟಲ್ಲಿ ಅವರ ಗರ್ಭವು ನಿಶ್ಚಿತವಾಗಿ ಸ್ಥಿರವಾಗುಳಿಯುವದು.

## ಸಂತತಿ ನಿಯಮನಕ್ಕಾಗಿ

ಇಂಗು ಹಾಗೂ ಎಣ್ಣೆಯ ಮಿಶ್ರಣವನ್ನು ಸಂಭೋಗದ ಪೂರ್ವದಲ್ಲಿ ಸೇವಿಸಿದರೆ ಗರ್ಭವುಂಟಾಗುವದಿಲ್ಲವೆಂದು ತಿಳಿಯಬೇಕು

ಸಂಭೋಗದ ಕಾಲದಲ್ಲಿ ಸ್ತ್ರೀಯ ಯೋನಿಯಲ್ಲಿ ಉಪ್ಪು ಲೇಪಿಸಿ ನಂತರ ಮೈಥುನ ಮಾಡಬೇಕು. ಅಂದರೆ ಗರ್ಭವು ನಿಶ್ಚಯವಾಗಿಯೂ ಉಂಟಾಗುವದಿಲ್ಲ.

ಸ್ತ್ರೀಯು ಪ್ರತಿದಿನ ಸಾಯಂಕಾಲ ಒಂದು ಲವಂಗವನ್ನು ಸೇವಿಸಿದರೆ ಅವಳಿಗೆ ಗರ್ಭವುಂಟಾಗುವದಿಲ್ಲವೆಂದು ತಿಳಿಯಬೇಕು.

ಪಿಂಪಳಿ, ವಾಯವಡಂಗ ಹಾಗೂ ಟಾಂಕಣಖಾರಗಳನ್ನು ಸಮ ಪ್ರಮಾಣದಲ್ಲಿ ತೆಗೆದುಕೊಂಡು ಚೂರ್ಣವನ್ನು ಸಿದ್ಧಪಡಿಸಬೇಕು. ಮಾಸಿಕ ಧರ್ಮದ ನಂತರ ೫ ದಿನಗಳ ವರೆಗೆ ಈ ಚೂರ್ಣವನ್ನು ದಿನಾಲು ೧ ತೊಲೆ ಯಂತೆ ಹಾಲಿನಲ್ಲಿ ಹಾಕಿ ತೆಗೆದುಕೊಳ್ಳಬೇಕು. ಹೀಗೆ ತೆಗೆದುಕೊಂಡಲ್ಲಿ ಗರ್ಭವು ನಿಲ್ಲುವದೆಂದು ತಿಳಿದುಕೊಳ್ಳಬೇಕು.

ಪುಷ್ಯ ನಕ್ಷತ್ರದ ಕಾಲದಲ್ಲಿ ಧತ್ತೂರಿಯ ಬೇರನ್ನು ತರಬೇಕು ಅದನ್ನು ಯಾವ ಸ್ತ್ರೀಯು ಹೊಟ್ಟೆಗೆ ಕಟ್ಟಿಕೊಳ್ಳುವಳೋ ಅವಳಲ್ಲಿ ಗರ್ಭ ವುಂಟಾಗುವದಿಲ್ಲವೆಂದು ತಿಳಿಯಬೇಕು.

ಹಲಸಿನ ಹಪ್ಪಳ, ಜೇನುತುಪ್ಪ ಹಾಗೂ ತುಪ್ಪ ಇವುಗಳ ಮಿಶ್ರಣ ವನ್ನು ಮಾಡಿ ಸ್ತ್ರೀಯ ಯೋನಿಯಲ್ಲಿರಿಸಿ ಸಂಭೋಗ ಮಾಡಿದಲ್ಲಿ ಅವಳಲ್ಲಿ ಅವಳಲ್ಲಿ ಎಂದಿಗೂ ಗರ್ಭವುಂಟಾಗುವದಿಲ್ಲವೆಂಬದು ಖಾತ್ರಿ ಎಂದು ತಿಳಿದು ಕೊಳ್ಳಬೇಕು.

ಮೈಥುನದ ನಂತರ ಸ್ತ್ರೀಯ ಯೋನಿಯಲ್ಲಿ ಕರಿಮೆಣಸನ್ನು ಇರಿಸ ಲಾಗಿ ಅವಳಲ್ಲಿ ಗರ್ಭವುಂಟಾಗುವದಿಲ್ಲವೆಂದು ತಿಳಿದುಕೊಳ್ಳಬೇಕು.

ಸ್ತ್ರೀಯು ಚಮೇಲಿ ಹೂವಿನ ೧ ಪಕಳಿಯನ್ನು ತೆಗೆದುಕೊಂಡಲ್ಲಿ ಅವಳು ೧ ವರ್ಷದ ವರೆಗೆ ಗರ್ಭವತಿಯಾಗುವದಿಲ್ಲವೆಂದು ತಿಳಿಯಬೇಕು.

## ಅಜೀರ್ಣಕ್ಕಾಗಿ

ಅನ್ನಾಹಾರವನ್ನು ಪಚನ ಮಾಡುವಂತಹ ಅಗ್ನಿಯು ಯೋಗ್ಯ ರೀತಿ ಯಿಂದ ಅನ್ನವನ್ನು ಪಚನ ಮಾಡದಿದ್ದಲ್ಲಿ ಎಲ್ಲವೂ ವಿಕೃತವಾಗುವದು. ಅಜೀರ್ಣ ಮಂದಾಗ್ನಿಗಳು ಉಂಟಾಗುವವು. ಬಹಳ ನೀರು ಕುಡಿಯು ವದು; ಊಟದ ನಂತರ ಹೆಚ್ಚು ವಿಶ್ರಾಂತಿಯನ್ನು ತೆಗೆದುಕೊಳ್ಳುವದು, ಹಗಲಿನಲ್ಲಿ ಮಲಗುವದು, ರಾತ್ರಿಯಲ್ಲಿ ಎದ್ದು ಕೂಡ್ರುವದು, ಅನಿಯಮಿತ ವೇಳೆಯಲ್ಲಿ ಊಟ ಮಾಡುವದು, ವ್ಯಾಯಾಮ ಮಾಡದಿರುವದು, ಅಲ್ಲದೇ ಭಯ ಕ್ರೋಧ ಲೋಭ ಶೋಕ ಈರ್ಷೆ ಇತ್ಯಾದಿ ಮಾನಸಿಕ ಉದ್ವೇಗ ಗಳಿಂದ ಊಟವು ಪಚಿಸುವದಿಲ್ಲ. ಮನಸ್ಸು ಉದಾಸವಾಗಿರುವದು. ಹೊಟ್ಟೆ ಕಡಿಯುವದು, ಮುಖದಮೇಲೆ ಬೆವರುಬರುವದು ಇವು ಸಾಮಾನ್ಯ ವಾದ ಲಕ್ಷಣಗಳಾಗಿರುವವು

ಅಜೀರ್ಣ ರೋಗಕ್ಕಾಗಿ ಚಿಕಿತ್ಸೆಯು ಈ ರೀತಿಯಾಗಿರುವದು:— ಜೀರಗಿ ೧ ತೊಲೆ, ಪೀಪಲ ೧ ತೊಲೆ, ಕರಿಉಪ್ಪು ೧ ತೊಲೆ, ಶುಂಠಿ ೧ತೊಲೆ ಕರಿಮೆಣಸು ೧ ತೊಲೆ, ಸೈಂಧ ಲವಣ ಉಪ್ಪು ೧ ತೊಲೆ, ವಾಯವಡಂಗ ೧ ತೊಲೆ, ಇಂಗು ೧ ತೊಲೆ, ಅಜವಾನ ೧ ತೊಲೆ ಇವೆಲ್ಲವನ್ನು ಸೇರಿಸಿ ಕುಟ್ಟಿ ಚೂರ್ಣ ಮಾಡಬೇಕು. ಈ ಚೂರ್ಣವನ್ನು ಸೇವಿಸಬೇಕು. ಇದನ್ನು ಒಂದರಿಂದ ಒಂದೂವರಿ ಮಾಸಿಯಷ್ಟನ್ನು ಬಿಸಿನೀರಿನಲ್ಲಿ ಹಾಕಿ ಕೊಂಡು ಸೇವಿಸಬೇಕು. ಇದನ್ನು ನಿಯಮಿತವಾಗಿ ಕೆಲ ದಿನಗಳ ವರೆಗೆ ಸೇವಿಸುವದರಿಂದ ಮಂದಾಗ್ನಿ ನಷ್ಟವಾಗಿ ಭೋಜನ ರುಚಿಯು ಚೆನ್ನಾಗಿ ಬೆಳೆಯುವದು. ಅಲ್ಲದೇ ಅಜೀರ್ಣವಾಗಿದೆ ಎಂದು ಕಂಡು ಬಂದಸಮಯ

ದಲ್ಲಿ ತೆಗೆದುಕೊಳ್ಳಲಾಗಿ ಅಜೀರ್ಣವು ನಿವಾರಣೆಯಾಗುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

## ಕೇಶನಾಶನ ಔಷಧ

ಕರ್ಪೂರ, ಬಿಂಬಾ, ಶಂಖಚೂರ್ಣ, ಟಾಂಕಣಖಾರ ಹಾಗೂ ಅಜಮೋರಗಳ ಚೂರ್ಣವನ್ನು ಸಿದ್ಧಪಡಿಸಬೇಕು. ಈ ಚೂರ್ಣವನ್ನು ಎಣ್ಣೆಯಲ್ಲಿ ಕಲಸಬೇಕು. ಹರತಾಳವನ್ನು ಅದರಲ್ಲಿ ಸೇರಿಸಬೇಕು. ಈ ರೀತಿ ಸಿದ್ಧಪಡಿಸಿದ ಎಣ್ಣೆಯನ್ನು ಹಚ್ಚಿಕೊಳ್ಳಲಾಗಿ ಕೇಶಗಳೆಲ್ಲ ಉದರಿ ಹೋಗುವದು ಖಾತ್ರಿ ಎಂದು ತಿಳಿದುಕೊಳ್ಳಬೇಕು.

೨ ಭಾಗ ಶಂಖಚೂರ್ಣ ೧ ಭಾಗ ಹರತಾಳ. ಇವನ್ನು ಒಂದುಗೂಡಿಸಿ ಅದನ್ನು ಕೇಶಕ್ಕೆ ಲೇಪಿಸಿಕೊಳ್ಳಲಾಗಿ ಕೇಶಗಳೆಲ್ಲ ಉದುರುವವು.

ಶಂಖಭಸ್ಮ, ಹರತಾಳಗಳನ್ನು ಸಮಭಾಗ ಮಾಡಿ ಬಾಳೆಹಣ್ಣಿನ ರಸದಲ್ಲಿ ಸೇರಿಸಬೇಕು. ಅದನ್ನು ಕೇಶಗಳಿಗೆ ಲೇಪಿಸಬೇಕು. ಅದನ್ನು ಕೇಶಗಳಿಗೆ ಲೇಪಿಸಬೇಕು. ಅದರಿಂದ ಕೇಶಗಳೆಲ್ಲ ಉದುರಿ ಮುಂದೆ ಕೂದಲು ಬೆಳೆಯುವದಿಲ್ಲವೆಂದು ತಿಳಿಯಬೇಕು.

೧ ಭಾಗ ಹರತಾಳ ಹಾಗೂ ೬ ಭಾಗ ಸುಣ್ಣ ಕೂಡಿಸಿ ನೀರಿನಲ್ಲಿ ಹಾಕಿ ಮಿಶ್ರಣವನ್ನು ಸಿದ್ಧಪಡಿಸಬೇಕು. ಇದನ್ನು ಕೇಶಕ್ಕೆ ಲೇಪಿಸಲಾಗಿ ಸ್ವಲ್ಪೇ ವೇಳೆಯಲ್ಲಿ ಕೂದಲುಗಳೆಲ್ಲ ಉದುರಿ ಬೀಳುವವು.

## ಆಂವ ರಕ್ತಕ್ಕಾಗಿ

ಉರುಳಿಗಡ್ಡೆಯ ಸಣ್ಣ ಸಣ್ಣ ಚೂರುಗಳನ್ನು ಮಾಡಿ ಅವನ್ನು ನೀರಿನಲ್ಲಿ ೫-೬ ಸಲ ಸ್ವಚ್ಛವಾಗಿ ತೊಳೆಯಬೇಕು. ನಂತರ ಆಕಳ ಮೊಸರಿನಲ್ಲಿ ಅದನ್ನು ಕೂಡಿಸಿ ಸೇವಿಸಬೇಕು. ಅಂದರೆ ಆಂವ ರಕ್ತ ವಿಕಾರವು ನಿಲ್ಲುವದೆಂದು ತಿಳಿದುಕೊಳ್ಳಬೇಕು.

## ಮೊಲೆ ಹಾಲು ಹೆಚ್ಚುವದಕ್ಕಾಗಿ

ಬಿಳಿ ಜೀರಿಗೆ ಹಾಗೂ ಹಳೆ ಅಕ್ಕಿಯ ಅನ್ನವನ್ನು ಸೇವಿಸಬೇಕು. ಅಂದರೆ ಆ ಬಾಣಂತಿಯ ಮೊಲೆ ಹಾಲು ಹೆಚ್ಚುವದು ಹಾಗೂ ಕೂಸಿಗೆ ಸಾಕಷ್ಟು ಹಾಲು ದೊರೆಯುವದು ಎಂದು ತಿಳಿದುಕೊಳ್ಳಬೇಕು.

## ನಿಂತ ಮಾಸಿಕಧರ್ಮದ ಪ್ರಾರಂಭಕ್ಕೆ

ಎಳ್ಳಿನ ಕಾಢೆ ಮಾಡಿ ಅದರಲ್ಲಿ ಬೆಲ್ಲ ಹಾಕಿ ಅದನ್ನು ಸೇವಿಸಲಾಗಿ ನಿಂತಂಥ ಮಾಸಿಕ ಧರ್ಮವು ಪುನಃ ಪ್ರಾರಂಭವಾಗಿ ನಿಯಮಿತವಾಗಿ ನಡೆಯುವದೆಂದು ತಿಳಿದುಕೊಳ್ಳಬೇಕು.

## ಜಂತು ನಾಶಕ್ಕಾಗಿ

ಔಡಲಎಣ್ಣೆ ಮತ್ತು ಗೋ ಮೂತ್ರವನ್ನು ಸೇರಿ ಹುಡುಗರಿಗೆ ಕೊಡಬೇಕು. ಅದರಿಂದ ಜಂತುಗಳು ಹೊಟ್ಟೆಯಲ್ಲಿಯೇ ನಾಶವಾಗುವವೆಂದು ತಿಳಿಯಬೇಕು.

## ಮೂಲವ್ಯಾಧಿಗಾಗಿ

ಲಿಂಬೆಯ ತಿಳಲು ೩ ಮಾಸಿ ಮತ್ತು ಬೆಲ್ಲ ೭ ಮಾಸಿ ಹೀಗೆ ಸೇರಿಸಿ ದಿನಾಲು ತೆಗೆದುಕೊಳ್ಳಬೇಕು. ೭ ದಿನಗಳ ವರೆಗೆ ಈ ರೀತಿ ತೆಗೆದುಕೊಳ್ಳಲಾಗಿ ಮೂಲವ್ಯಾಧಿಯು ಸಂಪೂರ್ಣವಾಗಿ ನಾಶವಾಗುವದೆಂದು ತಿಳಿದುಕೊಳ್ಳಬೇಕು.

## ಜಂದ್ರೋದಯ ಯಂತ್ರ

| | | | |
|---|---|---|---|
| ೧ | ೨ | | ೩ |
| | ೪ | ೫ | |
| ೬ | ೭ | | ೮ |
| ೯ | ೧೦ | | ೧೧ |

ನಿಮ್ಮ ಬಳಿಗೆ ಯಾರಾದರೂ ಪ್ರಶ್ನೆ ಕೇಳಲಿಕ್ಕೆ ಬಂದಾಗ ಈ ಯಂತ್ರದ ಉಪಯೋಗವನ್ನು ಮಾಡಬೇಕು. ಅವರಿಗೆ ಬಗವಾನ ಶಂಕರನ ಹೆಸರನ್ನು ತೆಗೆದುಕೊಂಡು ಈ ಯಂತ್ರದಲ್ಲಿಯ ಒಂದು ಅಂಕೆಯ ಮೇಲೆ ಕಣ್ಣುಮುಚ್ಚಿಕೊಂಡು ಕೈಯಿರಿಸುವಂತೆ ಹೇಳಬೇಕು. ಯಾವ ಅಂಕೆಯ ಮೇಲೆ ಕೈಯಿರಿಸುವರೊ ಅದರ ಫಲವನ್ನು ನೋಡಿಕೊಂಡು ಅವರಿಗೆ ತಿಳಿಸಬೇಕು

### ಅಂಕೆಗಳ ಫಲವು

೧) ನೀವು ಮನಸ್ಸಿನಲ್ಲಿ ಮಾಡಿಕೊಂಡ ಕಾರ್ಯವನ್ನು ಪರಮೇಶ್ವರನು ಬಹುಬೇಗ ಸಿದ್ಧಗೊಳಿಸುವನು. ಅದರಿಂದ ನಿಮಗೆ ಕೆಲಮಟ್ಟಿಗೆ ಧನವೂ ದೊರೆಯುವದು ನಿಮ್ಮ ಎಲ್ಲ ಇಚ್ಛೆಗಳೂ ಪೂರ್ಣವಾಗುವವು ಸಾಧ್ಯವಾದಲ್ಲಿ ಪ್ರತಿ ಶನಿವಾರ ಶನಿಪೂಜೆಯನ್ನು ಮಾಡಬೇಕು. ಕರಿ ನಾಯಿಗೆ ಆಹಾರ ಕೊಡಬೇಕು.

೨) ಈಗ ನಿಮ್ಮ ಸಂಕಷ್ಟಗಳು ದೂರವಾಗುವ ದಿನಗಳು ಬಂದಿದ್ದು ಒಳ್ಳೇ ದಿನಗಳು ಸಮೀಪಿಸಿರುವವು ನಿಮ್ಮ ಕಾರ್ಯವು ಅದಕ್ಕಾಗಿ ಅವಶ್ಯವಾಗಿ ಸಿದ್ಧಿಸುವದು. ಕಾರ್ತಿಕ ಮಾಸದಿಂದ ನೀವು ಸಂತೋಷಚಿತ್ತರಾಗುವಿರಿ. ಮನೆಯಲ್ಲಿ ಆಶಾವಾತಾವರಣವುಂಟಾಗುವದು. ನೀವು ಭಗವಾನ ಶಂಕರನ ಆರಾಧನೆಯನ್ನು ಮಾಡಬೇಕು. ನಿತ್ಯವೂ ಬಿಲ್ವಪತ್ರವನ್ನು ಏರಿಸಬೇಕು.

೩) ನಿಮ್ಮ ಸಂಬಂಧಿಕರು ಹಾಗೂ ಮಕ್ಕಳಿಂದ ನಿಮಗೆ ಅತ್ಯಂತ ಸಂತೋಷವುಂಟಾಗುವದು. ಈಗ ಒಳ್ಳೇ ದಿನಗಳು ಬಂದಿರುವದರಿಂದ ಸ್ವಲ್ಪ ಗುಪ್ತ ಧನವೂ ಸಹ ನಿಮಗೆ ಲಭ್ಯವಾಗುವ ಯೋಗವಿರುವದು. ಭಾದ್ರಪದ ಮಾಸದಲ್ಲಿ ನೀವು ಬಹಳೇ ಲಾಭವನ್ನು ಗಳಿಸುವಿರಿ. ನೀವು ಶ್ರೀ ಹನುಮಂತ ದೇವರನ್ನು ಪೂಜಿಸಬೇಕು ಹಾಗೂ ಮಂಗಳವಾರ ದಿವಸ ವ್ರತವನ್ನು ಆಚರಿಸಬೇಕು.

೪) ನಿಮ್ಮ ಕಾರ್ಯವು ಬೇಗನೆ ಈಡೇರುವದರಿಂದ ಶತ್ರುಗಳ ಕುಚೇಷ್ಟೆಗಾಗಲಿ, ಮಾತಿಗಾಗಲಿ ಕಿವಿಗೊಡಬೇಡಿರಿ. ಅದೇ ಕಾಲಕ್ಕೆ ಶತ್ರುಗಳ ಬಗೆಗೆ ಅನಿಷ್ಟವನ್ನು ಇಚ್ಛಿಸಬೇಡಿರಿ. ಸದಾಕಾಲ ಭಗವಾನನಲ್ಲಿ ವಿಶ್ವಾಸವಿಡಿರಿ. ನೀವು ಅವಶ್ಯವಾಗಿ ದುರ್ಗಾಮಾತೆಯ ಪೂಜೆಯನ್ನು ಮಾಡಬೇಕು.

೫) ನಿಮ್ಮ ಕಾರ್ಯವು ಅತ್ಯವಶ್ಯವಾಗಿ ಆಗೇ ಆಗುವದು ಶ್ರೀಭಗವಾನನ ಕೃಪೆಯಿಂದ ನಿಮಗೆ ಆನಂದದ ದಿನಗಳು ಪ್ರಾಪ್ತವಾಗಲಿರುವವು ಕೆಲ ದಿನಗಳ ನಂತರ ನಿಮ್ಮ ವ್ಯವಹಾರವೆಲ್ಲ ಹೆಚ್ಚುವದು. ನೀವು ಬ್ರಾಹ್ಮಣರ ಸೇವೆಯಲ್ಲಿ ನಿರತರಾಗಬೇಕು.

೬) ನಿಮ್ಮ ಮನೋರಥವು ಈಡೇರುವದು. ಭಗವಾನನ ಕೃಪೆಯಿಂದ ನಿಮಗೀಗ ಆನಂದದ ದಿನಗಳು ದೊರೆತಿವೆ. ದ್ರವ್ಯ ಲಾಭವು ಹೆಚ್ಚುವದು. ಮನೆತನದ ಸಂಬಂಧಿ ನಿಮ್ಮ ಇಚ್ಛೆಗಳೆಲ್ಲ ಪೂರ್ಣವಾಗುವವು. ನೀವು ಪ್ರಾಣಿ ಪಕ್ಷಿಗಳಿಗೆ ಆಹಾರವನ್ನು ಕೊಡುತ್ತ ಹೋಗಬೇಕು.

೭) ನಿಮಗೆ ಗುಪ್ತ ಧನವು ದೊರೆಯುವದು. ಅಲ್ಲದೇ ಪ್ರಿಯ ವ್ಯಕ್ತಿಯೊಂದಿಗೆ ನಿಮ್ಮ ಮಿಲನವಾಗುವದು. ಪೂರ್ವ ಇಲ್ಲವೇ ಉತ್ತರ ದಿಕ್ಕಿನಿಂದ ಅಥವಾ ಬೇರೆಡೆಯಿಂದ ನಿಮಗೆ ಇಚ್ಛಿತ ವಸ್ತುವು ಪ್ರಾಪ್ತಿಯಾಗುವದು. ನೀವು ಭಗವಾನ ಶ್ರೀ ನೃಸಿಂಹನ ಪೂಜೆಯನ್ನು ಮಾಡುತ್ತ ಹೋಗಬೇಕು.

೮) ಈಗ ನಿಮಗೆ ಒಳ್ಳೇ ದಿನಗಳು ಇಲ್ಲದೇ ಇರುವದರಿಂದ ನಿಮ್ಮ ಕಾರ್ಯವು ಸದ್ಯಕ್ಕೆ ಈಡೇರುವದಿಲ್ಲ. ಸ್ವಲ್ಪಮಟ್ಟಿಗೆ ಹಾನಿಯಾಗಲೂಬಹುದು ಆದರೆ ಚೈತ್ರಮಾಸದಿಂದ ನಿಮಗೆ ಒಳ್ಳೇ ದಿನಗಳು ಬರಲಿರುವವು ಅದಕ್ಕಾಗಿ ಗಾಬರಿಯಾಗಕೂಡದು. ನಿಮಗೆ ಸಾಧ್ಯವಾಗುತ್ತಿದ್ದರೆ ಸ್ನಾನ ಮಾಡಿದ ನಂತರ ಪೀಪಲ್ ಗಿಡಕ್ಕೆ ನೀರು ಹಾಕಬೇಕು

೯) ನೀವು ಕೆಲ ದಿನಗಳಲ್ಲಿಯೇ ಕಾಯಿಲೆ ಬೀಳುವ ಸಂಭವವಿರುತದು. ಆದರೆ ಅದಕ್ಕಾಗಿ ಗಾಬರಿಯಾಗದೇ ಶತ್ರುಗಳಿಂದ ನಿಮ್ಮನ್ನು ರಕ್ಷಿಸಿಕೊಳ್ಳುವ ಉಪಾಯವನ್ನು ಯೋಜಿಸಬೇಕು. ಭಗವಾನನು ನಿಮಗೆ ಒಳ್ಳೇದನ್ನು ಮಾಡುವನು, ಸಾಧ್ಯವಾದಲ್ಲಿ ನೀವು ಭಗವಾನ ಸೂರ್ಯದೇವನ ಉಪಾಸನೆಯನ್ನು ಮಾಡಬೇಕು.

೧೦) ೩ ತಿಂಗಳಲ್ಲಿ ಪೂರ್ವ ಅಥವಾ ಉತ್ತರದ ದೆಸೆಯಿಂದ ನಿಮಗೆ ಹಾನಿ ಸಂಭವಿಸುವ ಯೋಗವಿದೆ. ಆದರೆ ಅದೇ ವೇಳೆಗೆ ಬೇರೆ ರೀತಿಯಲ್ಲಿ ನಿಮಗೆ ದ್ರವ್ಯ ಲಾಭವಾಗುವ ಸಂಭವವೂ ಕಂಡು ಬರುವದು. ಅಲ್ಲದೇ ಓರ್ವ ದುಷ್ಟ ಸ್ತ್ರೀಯ ಭೆಟ್ಟಿಯಾಗುವ ಸಂಭವವಿದೆ. ನೀವು ಸಾಧ್ಯವಾದಲ್ಲಿ ಅನ್ನದಾನವನ್ನು ಮಾಡಬೇಕು.

೧೧) ನಿಮಗೆ ಯಾತ್ರೆಯನ್ನು ಮಾಡಬೇಕೆಂಬ ಅಭಿಲಾಷೆಯು ಬಹಳಷ್ಟು ಇರುವದು. ಯಾತ್ರೆಯಿಂದ ನಿಮಗೆ ಕೆಲಮಟ್ಟಿಗೆ ಲಾಭ ಕೂಡ ಆಗಲಿರುವದು. ಅಲ್ಲದೇ ಯಾವನಾದರೊಬ್ಬ ಮನುಷ್ಯನ ಭೆಟ್ಟಿಯು ಅಕಸ್ಮಾತ್ತಾಗಿ ಸಂಭವಿಸಿ ಅವನಿಂದ ನಿಮಗೆ ಕದಾಚಿತ್ ಉಪಯೋಗವಾಗುವ ಸಂಭವವಿರುವದು. ನೀವು ಭಗವಾನ್ ವಿಷ್ಣುದೇವನ ಆರಾಧನೆಯನ್ನು ಮಾಡುತ್ತ ಹೋಗಬೇಕು.

# ರಾಶಿ ಮತ್ತು ನಕ್ಷತ್ರಗಳನ್ನು ನೋಡುವದು

ನಿಮ್ಮ ಹೆಸರಿನ ಮೊದಲ ಅಕ್ಷರವು ಯಾವ ರಾಶಿಯಲ್ಲಿರುವದೋ ಅದೇ ನಿಮ್ಮ ರಾಶಿಯು. ಯಾವ ಚರಣದಲ್ಲಿರುವದೋ ಅದೇ ನಿಮ್ಮ ನಕ್ಷತ್ರವೆಂದು ತಿಳಿದುಕೊಳ್ಳಬೇಕು.

## ಮೇಷ

ಅಶ್ವಿನಿಯ ನಾಲ್ಕು ಚರಣಗಳು, ಚೊ ಚೆ ಚೊ ಲಾ
ಭರಣಿಯ ನಾಲ್ಕು ಚರಣಗಳು, ಲಿ ಲು ಲೂ ಲೋ
ಕೃತ್ತಿಕೆಯ ಒಂದು ಚರಣ, ಅ

## ವೃಷಭ

ಕೃತ್ತಿಕೆಯ ಹಿಂದಿನ ಮೂರು ಚರಣಗಳು, ಇ ಎ ಊ
ರೋಹಿಣಿಯ ನಾಲ್ಕು ಚರಣಗಳು, ವೊ ವಾ ಬಿ ಬೂ
ಮೃಗಶಿರಾದ ಮೊದಲಿನೆರಡು ಚರಣಗಳು, ವೆ ಮೊ

## ಮಿಥುನ

ಮೃಗಶಿರಾದ ಹಿಂದಿನ ೨ ಚರಣಗಳು, ಕಾ ಕಿ
ಆರಿದ್ರಾದ ೪ ಚರಣಗಳು, ಕೂ ಘ ಙ ಛ
ಪುನರ್ವಸುವಿನ ೩ ಚರಣಗಳು, ಕೆ ಕೊ ಹಾ

## ಕರ್ಕ

ಪುನರ್ವಸುವಿನ ೧ ಚರಣ, ಹಿ
ಪುಷ್ಯದ ೪ ಚರಣಗಳು, ಹೂ ಹೆ ಹೊ ಡಾ
ಆಶ್ಲೇಷಾದ ೪ ಚರಣಗಳು, ಡಿ ಡೂ ಡೆ ಡೊ

## ಸಿಂಹ

| | |
|---|---|
| ಮಘಾದ ೪ ಚರಣಗಳು. | ಮಾ ಮೀ ಮು ಮೆ |
| ಪೂರ್ವ ಫಾಲ್ಗುಣಿಯ ೪ ಚರಣಗಳು, | ಮೊ ಟಾ ಟಿ ಟೂ |
| ಉತ್ತರ ಫಾಲ್ಗುಣಿಯ ೧ ಚರಣ | ಟೆ |

## ಕನ್ಯಾ

| | |
|---|---|
| ಉತ್ತರ ಫಾಲ್ಗುಣಿಯ ೩ ಚರಣಗಳು, | ಟೊ ಟ ಟಿ |
| ಹಸ್ತದ ೪ ಚರಣಗಳು, | ಪು ಷ ಣ ಠ |
| ಚಿತ್ರಾದ ೨ ಚರಣಿಗಳು, | ಪೆ ಪೋ |

## ತುಲಾ

| | |
|---|---|
| ಚಿತ್ರಾದಿ ೨ ಚರಣಗಳು, | ರಾ ರಿ |
| ಸ್ವಾತಿಯ ೪ ಚರಣಗಳು; | ರೂ ರೆ ರೊ ತ |
| ವಿಶಾಖಾದ ೩ ಚರಣಗಳು, | ತೀ ತೂ ತೆ |

## ವೃಶ್ಚಿಕ

| | |
|---|---|
| ವಿಶಾಖದ ೧ ಚರಣ | ತೊ |
| ಅನುರಾಧದ ೪ ಚರಣಗಳು, | ನಾ ನಿ ನೂ ನೆ |
| ಜೇಷ್ಠದ ೪ ಚರಣಗಳು, | ನೊ ಯಾ ಟಿ ಯೂ |

## ಧನು

| | |
|---|---|
| ಮೂಲಾದ ೪ ಚರಣಗಳು, | ಯೆ ಯೊ ಭಾ ಭೀ |
| ಪೂರ್ವಾಷಾಢದ ೪ ಚಳಣಗಳು, | ಭೂ ಧಾ ಫಾ ಢಾ |
| ಉತ್ತರಾಷಾಢದ ೧ ಚರಣ | ಭೆ |

## ಮಕರ

| | |
|---|---|
| ಉತ್ತರಾಷಾಢದ ೩ ಚರಣಗಳು | ಮೊ ಜಾ ಜಿ |
| ಶ್ರವಣಾದ ೪ ಚರಣಗಳು | ಖಿ ಖು ಖೆ ಖೊ |
| ಧನಿಷ್ಠಾದ ೨ ಚರಣಗಳು | ಗಾ ಗಿ |

## ಕುಂಭ

| | |
|---|---|
| ಧನಿಷ್ಠಾದ ೨ ಚರಣಗಳು | ಗೂ ಗೆ |
| ಶರಷ್ಮಿಯ ೪ ಚರಣಗಳು | ಗೊ ಸಾ ಸಿ |
| ಪೂರ್ವ ಭಾದ್ರಪದೆಯ ೩ ಚರಣಗಳು | ಸೆ ಸೊ ದ |

## ಮೀನ

| | |
|---|---|
| ಪೂರ್ವ ಭಾದ್ರಪದೆಯ ೧ ಚರಣ | ದೊ |
| ಉತ್ತರ ಭಾದ್ರಪದೆಯ ೩ ಚರಣಗಳು | ದೂ ಥ ಝು ಉ |
| ರೇವತಿಯ ೪ ಚರಣಗಳು | ದೆ ದೊ ಚು ಚಿ |

## ಎಲ್ಲ ಕಾರ್ಯಗಳಲ್ಲಿಯೂ ಶುಭಾಶುಭ ಮುಹೂರ್ತಗಳು

ಶುಭ ತಿಥಿ:— ೧, ೩, ೫, ೮, ೧೦, ೧೧ ಹಾಗೂ ೧೩. ಕೃಷ್ಣಪಕ್ಷದ ಪ್ರತಿಪದೆಯು ಎಲ್ಲ ಕಾರ್ಯಗಳಿಗೂ ಶುಭ ತಿಥಿಯಾಗಿರುವದು.

ಶುಭವಾರ:— ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ.

ಶುಭ ನಕ್ಷತ್ರ:— ಅಶ್ವಿನಿ, ರೋಹಿಣಿ, ಮೃಗಶಿರಾ, ಪುನರ್ವಸು, ಪುಷ್ಯ, ಉತ್ತರಾ, ಹಸ್ತಾ, ಚಿತ್ತಾ, ಸ್ವಾತಿ, ಅನುರಾಧಾ, ಉತ್ತರಾಷಾಢಾ, ಶ್ರವಣಾ, ಧನಿಷ್ಠಾ, ಶತತಾರಕಾ, ಉತ್ತರ ಭಾದ್ರಪದ, ರೇವತಿ.

ಅಶುಭ ತಿಥಿ:— ಕ್ಷಯತಿಥಿ ಮತ್ತು ವೃದ್ಧಿ ತಿಥಿಗಳು ಅಲ್ಲದೇ ೧, ೪, ೬, ೧೪ ಹಾಗೂ ೩೦.

ಅಶುಭ ಯೋಗ:— ವ್ಯತಿಪಾತ ಮತ್ತು ವೈಧೃತಿ ಯೋಗಗಳನ್ನು ಸಂಪೂರ್ಣವಾಗಿ ತೊರೆಯಬೇಕು. ಶೂಲಯೋಗದ ಪ್ರಾರಂಭದ ಐದು ಘಟಿಕಗಳನ್ನು ಹಾಗೂ ವ್ಯಾಘಾತ ಯೋಗದ ಪ್ರಾರಂಭದ ೯ ಘಟಿಕಗಳನ್ನು ತೊರೆಯಬೇಕು.

ಶುಭ ಲಗ್ನ:— ಕನ್ಯಾ, ಮಿಥುನ, ಮಕರ ಮತ್ತು ತುಲಾ ಇವು ಪ್ರವಾಸ ಮಾಡುವವರಿಗೆ ಅತ್ಯಂತ ಶುಭ ಲಗ್ನಗಳೆಂದು ತಿಳಿಯಬೇಕು.






— ಸಂಪೂರ್ಣ —